

Chandamama, March '52

Photo by Pranlal K. Patel

ಅಲಂಕಾರ



## ಈ ಸಂಚಿಕೆಯಲ್ಲಿ



ಇವಲ್ಲದೆ ಚುಟಕ, ಒಗಟು, ಇತ್ಯಾದಿಗಳನೇಕ.




ಡಿಸ್ಟ್ರಿಬ್ಯೂಟರುಗಳು

| | | | |
|---|---|---|---|
| ಆಂಧ್ರಾ : | ಗೋಕುಲ್ ಕೃಷ್ಣಾ | .... | ವಿಜಯವಾಡ. |
| ನೈಜಾಮ್: | ಪ್ರೀಮಿಯರ್ | .... | ಸಿಕಿಂದ್ರಾಬಾದ್. |
| ಸೀಡೆಡ್ : | ಶಾಂತಿ | .... | ಗುಂಟಕಲ್. |
| ಮೈಸೂರು: | ಜಯಂತ್ | .... | ಬೆಂಗಳೂರು. |

# ಚಂದಮಾಮ



ವಾರ್ಷಿಕ ಚಂದಾ

ರೂ. ೪-೮-೦

ಎರಡು ವರ್ಷ ಚಂದಾ

ರೂ. ೮-೦-೦



CHANDAMAMA OFFICE
2 & 3 Arcot Road,
Kodambakkam :: Madras-24

ಚಂದಮಾಮದ ಹಿತೈಷಿಗಳು ದಯವಿಟ್ಟು
ಚಂದಮಾಮದ ಹೊಸ ವಿಳಾಸವನ್ನು ಗಮನಿಸಿರಿ.

**2 & 3, ಆರ್ಕಾಟ್ ರೋಡು, ಕೋಡಂಬಾಕಮ್
ಮದರಾಸು - 24.**



ಪೋಸ್ಟ್ ಬಾಕ್ಸ್ ನಂಬರನ್ನು ದಯವಿಟ್ಟು
ಸೂಚಿಸಬಾರದಾಗಿ ಕೋರಿಕೆ.



ಮಲಯಾಳ ಮತ್ತು ಮರಾಠಿ ಭಾಷೆಗಳಲ್ಲೂ
ಚಂದಮಾಮ ಶೀಘ್ರದಲ್ಲಿ ಬರುವುದು.






ನಿಮ್ಮ ಚರ್ಮವನ್ನು ಎಲ್ಲಾ ಸಮಯದಲ್ಲಿ, ನಯವಾಗಿ, ಮತ್ತು ಶುಭ್ರವಾಗಿ ಇಡುವುದಕ್ಕೆ ನಿಮ್ಮ "ರವಿ ಗ್ಲಿಸರಿನ್" ಸೋಪಿನ ಮೇಲೆ ಭರವಸೆ ಇಡಿರಿ.

ಹೆಚ್ಚಿನ ಕೂದಲು ಬೆಳವಣಿಗೆಗೆ "ಬ್ರಹ್ಮೋಲ್" ಕೂದಲು ತೈಲವನ್ನು ಉಪಯೋಗಿಸಿರಿ. ಸುವಾಸನೆಯುಳ್ಳದ್ದಾಗಿ ಮೆದುಳನ್ನು ತಂಪಾಗಿ ಇಡುವುದು.



ವ್ಯಾಪಾರ ವಿವರಗಳಿಗೆ:

**ದಿ ನ್ಯೂ ಸ್ಟಾರ್ ಅಂಡ್ ಕಂಪೆನಿ,**
10, ವೈದ್ಯನಾಥ ಮುದಲಿ ಬೀದಿ, ತಂಡಿಯಾರ್‌ಪೇಟೆ, ಮದ್ರಾಸು-21



ಮಕ್ಕಳೆಂದರೆ ತಾಯಂದರಿಗೆ ಸಿಹಿ!
ಪೆಪ್ಪರಮೆಂಟುಗಳು ಮಕ್ಕಳಿಗೆ ಸಿಹಿ!
ಸಿಹಿಯುಳ್ಳ ಪೆಪ್ಪರಮೆಂಟುಗಳು




ಯವರದೇ

**M.A.P. INDUSTRIES**
**TONDIARPET. MADRAS.21**



# ಮುಖಚಿತ್ರ

ಕೌರವರಿಗೂ ಪಾಂಡವರಿಗೂ ಮಧ್ಯೆ ಯುದ್ಧ ನಡೆಯುವುದೆಂಬ ವಾರ್ತೆ ಬಲರಾಮನ ಕಿವಿಗೆ ಬಿದ್ದಿತು. ಅವನಿಗೆ ಇಬ್ಬರೂ ಒಂದೇ. ಆದುದರಿಂದ ಯಾವ ಪಕ್ಷವನ್ನೂ ಸೇರಲು ಇಷ್ಟವಿಲ್ಲದೆ ತೀರ್ಥಯಾತ್ರೆಯ ನೆಪದಲ್ಲಿ ಹೊರಟುಬಿಟ್ಟನು. ಅನೇಕ ನದಿ, ಪುಣ್ಯತೀರ್ಥಗಳಲ್ಲಿ ಮುಳುಗಿ ಪವಿತ್ರ ಕ್ಷೇತ್ರಗಳನ್ನು ಸಂದರ್ಶಿಸಿ ಕಡೆಗೆ ನೈಮಿಶ ಕ್ಷೇತ್ರಕ್ಕೆ ಬಂದನು.

ಅಲ್ಲಿ ತಪಸ್ಸು, ಯಾಗಾದಿ ಕರ್ಮಗಳಲ್ಲಿ ನಿರತರಾಗಿದ್ದ ಮುನಿಗಳು ಆಕಸ್ಮಿಕವಾಗಿ ಬಂದ ಬಲರಾಮನನ್ನು ಕಂಡರು. ಅತಿ ಸಂತೋಷ ಭರಿತರಾಗಿ ಎಲ್ಲರೂ ಎದ್ದು ಬಂದು ಆತನನ್ನು ಉಪಚರಿಸಿ ಪೂಜಿಸಿದರು. ಆದರೆ ರೋಮಹರ್ಷಣನೆಂಬ ಋಷಿ ಮಾತ್ರ ತನ್ನ ಆಸನ ಬಿಟ್ಟೇಳದೆ ಅಲಕ್ಷ್ಯದಿಂದಿರಲು ಬಲರಾಮನಿಗೆ ಕೋಪವುಂಟಾಯಿತು. "ಇವನ ಅಹಂಕಾರವೆಷ್ಟು? ಗರ್ವವುಳ್ಳ ಈ ಕಪಟ ಸನ್ಯಾಸಿಯನ್ನು ಕೊಲ್ಲುವುದೇ ಸರಿ" ಎಂದು ದರ್ಭೆ ಪ್ರಯೋಗಿಸಿ ಸಂಹರಿಸಿಬಿಟ್ಟನು.

ಇದನ್ನು ನೋಡಿ ಅಲ್ಲಿದ್ದ ಮಹರ್ಷಿಗಳೆಲ್ಲರೂ ವ್ಯಾಕುಲಿತರಾಗಿ "ಓ ಮಹಾನುಭಾವಾ, ಇದೇನಿದು? ಲೋಕಪಾವನನಾದ ನೀನೇ ಇಂತಹ ಅಧರ್ಮ ಮಾಡಿಬಿಟ್ಟೆಯಲ್ಲಾ? ಬ್ರಹ್ಮಾಸನದಲ್ಲಿದ್ದ ಋಷಿಯನ್ನು ಕೊಂದುದಕ್ಕೆ ಈಗ ಬ್ರಹ್ಮಹತ್ಯಾದೋಷ ನಿನಗೆ ಅಂಟಿತು...." ಎಂದು ಮುಂತಾಗಿ ಉಚಿತಾನುಚಿತಗಳನ್ನು ವಿವರಿಸಿದರು. ಆಗ ಬಲರಾಮನು ತನ್ನ ತಪ್ಪನ್ನರಿತು "ಮಹರ್ಷಿಗಳೇ! ನಾನು ಮಾಡಿದ ಪಾಪಕ್ಕೆ ತಕ್ಕ ಪ್ರಾಯಶ್ಚಿತ್ತವನ್ನು ವಿಧಿಸಿರಿ. ದುಡುಕಿನ ಫಲ ಅನುಭವಿಸಲು ಸಿದ್ಧನಿರುವೆನು" ಎನ್ನಲು, ಮುನಿಗಳು "ಓ ಮಹಾತ್ಮ, ನೀನು ಹನ್ನೆರಡು ವರ್ಷ ತೀರ್ಥಯಾತ್ರಾದಿ ಭೂಪ್ರದಕ್ಷಿಣೆ ಮಾಡಿದರೆ ಪ್ರಾಯಶ್ಚಿತ್ತವಾದಂತೆ. ಆದರೆ ಅದಕ್ಕೆ ಮುಂಚೆ ಇಲ್ವಲನ ಮಗನಾದ ಪಲ್ವಲನೆಂಬ ರಾಕ್ಷಸನು ಪರ್ವಕಾಲದಲ್ಲಿ ನಮ್ಮ ಯಾಗಾದಿ ಕರ್ಮಗಳಿಗೆ ಅಡ್ಡಿಪಡಿಸಿ ತೊಂದರೆ ಕೊಡುತ್ತಿದ್ದಾನೆ. ಆತನನ್ನು ಮೊದಲು ಸಂಹರಿಸಿ ನಂತರ ಯಾತ್ರೆ ಮುಂದುವರಿಸು" ಎಂದು ಸಲಹೆಯಿತ್ತರು.

ಅದೇರೀತಿ ಒಂದು ದಿನ ಪರ್ವಕಾಲದಲ್ಲಿ ಆ ರಾಕ್ಷಸನನ್ನು ಬಲರಾಮನು ಕೊಂದು ಮುನಿಗಳ ಪೀಡೆ ಪರಿಹರಿಸಿ ಅವರನ್ನು ಬೀಳ್ಕೊಂಡು ತೀರ್ಥಯಾತ್ರೆ ಮುಂದುವರಿಸಿದನು.

ಚಂದಮಾಮ
ಮಕ್ಕಳ ಕಥೆಯ ಮಾಸಪತ್ರಿಕೆ



ಸಂಪುಟ ೮ : ಸಂಚಿಕೆ ೩ — ಮಾರ್ಚಿ ೧೯೫೬

## ಚಾಂದ್ರಮಾನ ಯುಗಾದಿ

ನವ ಯುಗಾದಿಯು ನಲಿದು ಬರುತಿದೆ
ಚೆಲುವ ಚೈತ್ರದ ಜತೆಯೊಳು
ಮೆರೆದು ಬರುತಿದೆ, ಹಳೆಯ ಹೊಲಸನು
ದಹಿಸಿ ಕಾಮನ ಚಿತೆಯೊಳು.

ಖಗಗಳಿಂಪಲಿ ಹಾಡುತಿರುವುವು
ನೀಲ ಗಗನವ ಮೊಳಗುತ
ಬಿಸಿಲ ತಾಪವ ತೋರಿ ಬರುತಿಹ
ರವಿಯು ಬುವಿಯನು ಬೆಳಗುತ.

ಶಾಂತಿಸೊಬಗಿನ, ಹಾಲಬೆಳಕನು
ಚೆಲ್ಲಿ ಇರುಳಲಿ ಚಂದ್ರನು,
ಬಾನಬನದಲಿ ಬಿನದಿ ಬರುತಿಹ
ತಾರೆ ವೃಂದದ ಇಂದ್ರನು.

ಕ್ಷಾಮ, ಢಾಮರ, ದುಃಖ ಬಡತನ
ದಿಂದ ಸೊರಗಿಹ ತಿರೆಯೊಳು,
ಸಮರ ಕಹಳೆಯ ಕ್ರೂರವಾರ್ತೆಯ
ಕೇಳಿ ಬೆದರಿಹ ಧರೆಯೊಳು.

ಹೊಸತು ವರುಷದಿ ಹರುಷ ಗೆಲುವನು
ಚಂದಮಾಮನು ಕೋರಲಿ
ಶಾಂತಿ ಪ್ರೇಮದ, ಅಮರ ನೀತಿಯ
ಜಗದ ಜನರಿಗೆ ಸಾರಲಿ.

—ಡಿ. ಎಸ್. ರಾಜಣ್ಣ, ಕೋಲಾರ.






# ಪುಣ್ಯ ಯಾರದು?

ಪೂರ್ವದಲ್ಲಿ ರಾಜನೊಬ್ಬ
ಕೀರ್ತಿಗಾಗಿ ಆಸೆಪಟ್ಟು
ಭವ್ಯಗುಡಿಯು ಕಟ್ಟಿಸಲ್ಕೆ
ಮನವಮಾಡಿದ,
ಜನಕೆ—ಪ್ರಕಟಗೊಳಿಸಿದ.

ಧನಕೆ ಜನಕೆ ಕಮ್ಮಿಯೇನು
ರಾಜಕೋಶ ತುಂಬಿರಲ್ಕೆ
ಅಂಕೆ ಶಂಕೆ ಪಡದೆ ನಿಜದಿ
ಗುಡಿಯುಕಟ್ಟಿದ,
ಒಳಗೆ—ದೇವನಿರಿಸಿದ.

ಅತ್ಯಪೂರ್ವ ಕುಶಲಕಾರ್ಯ
ಎತ್ತಿನಿಂತ ಭವ್ಯ ಶಿಖರ
ಸುತ್ತುಗೋಡೆ ಎಲ್ಲಮೆಚ್ಚಿ
ಜನವು ಪೊಗಳಿತು,
ಎಲ್ಲೂ—ಹರ್ಷ ಮೂಡಿತು.

ಅರಸನಾಗ ತನ್ನಪೆಸರ
ಬಿರುದುಸಹಿತ ಗುಡಿಯದ್ವಾರ
ದಲ್ಲಿ ಕೆತ್ತಿ ತನ್ನಕೀರ್ತಿ
ಪಸರಲೆಣಿಸಿದ,
ಮುದದಿ—ತೃಪ್ತಿಹೊಂದಿದ.

ಉತ್ಸವಾದಿ ಸಂಬರದಿ
ದಣಿದು ರಾಜ ನಿದ್ದೆಗೈಯೆ
ಕನಸಿನಲ್ಲಿ ರಾಜನಾಮ
ವಳಿದು ಹೋಯಿತು,
ವನಿತೆ—ನಾಮಕಂಡಿತು.

'ಕಮಲಪ್ರಿಯೆ' ಮದರಾಸು.
(ತೆಲುಗಿನಾಧಾರ)

ಬೆಚ್ಚಿಬಿದ್ದು ರಾಜನೆದ್ದು
ಭಟರ ಕಳುಹಿ ರಾಜ್ಯದೊಳಗೆ
ಹುಡುಕಿ ಅಂತಹ ಹೆಸರಿನವಳ
ತನ್ನಿರೆಂದನು,
ಆಕೆ—ನಾಮ ನುಡಿದನು.

ಕೆಲವೆ ದಿನದಿ ಹಲವು ಜಾಗ
ಅಲೆದು ಓರ್ವ ಸಾಯುತಿದ್ದ
ಮುದುಕಿಯನ್ನು ಭಟರುಹಿಡಿದು
ತೋರೆ ಬಂದರು,
ರಾಜ—ಸಮುಖ ನಿಂದರು,

"ದೇವ ಗುಡಿಯ ನಿರ್ಮಿಸಲ್ಕೆ
ನೀನು ಗೈದ ಕಾರ್ಯವೇನು?
ಏಕೆ ನಿನ್ನ ನಾಮವಲ್ಲಿ
ಕಾಣಬಂದಿತು?"
ಎಂದು—ರಾಜ ಕೇಳ್ದನು.

ಮುಗ್ಧವೃದ್ಧೆ ನಡುಗಿನಿಂತು
"ಎನ್ನೊಡೆಯಾ, ನಾನರಿಯೆ,
ಗುಡಿಯಕಲ್ಲು ಹೊರುವಪಶುಗೆ
ಮೇವು ಹಾಕಿದೆ,
ನೀರು—ಕೊಟ್ಟೆ" ನೆಂದಳು.

"ಜನದ ಹಣವ ವ್ಯಯಿಸಿ ನಾನು
ಕೀರ್ತಿಬಯಿಸಿ ಸ್ವಾರ್ಥಿಯಾದೆ
ಆಕೆಯದೆ ನಿಸ್ವಾರ್ಥಸೇವೆ"
ಎಂದರಸ ನುಡಿದನು,
ಆಕೆ—ಪೆಸರೆ ಕೆತ್ತಿರೆಂದನು.





# 'ಎರಡನೇ ಬೆಕ್ಕು'

ತಗಡೂರಿನಲ್ಲಿ ಹಿಂದೆ ತೋಟ, ಬೇಟ ಎಂಬಿಬ್ಬರು ಕಳ್ಳರಿದ್ದರು. ತೋಟನು ಹಿರಿಯುವ, ಬುದ್ಧಿವಂತ. ಕಳ್ಳತನದಲ್ಲಿ ಅನುಭವಸ್ಥ, ನಿಪುಣ. ಅವನ ಕಳ್ಳತನ ಯಾರಿಗೂ ಪತ್ತೆಯೇ ಆಗುತ್ತಿರಲಿಲ್ಲ.

ಬೇಟ ಚಿಕ್ಕವ; ಅನುಭವವಿಲ್ಲದವ. ಆಗತಾನೆ ತೋಟನ ಕೈಯಲ್ಲಿ ತಯಾರಾಗುತ್ತಿದ್ದವ. ಆದರೆ ಸಮಯದಲ್ಲಿ ಬುದ್ಧಿ ಉಪಯೋಗಿಸಿ ಬಚಾವಾಗುವ ಚಾಕಚಕ್ಯತೆಯೇ ಇರಲಿಲ್ಲ. ಆದುದರಿಂದ ತೋಟ ಬೇಟನೊಡನೆ ಹೀಗಂದ "ಲೋ, ಮಗ, ಇನ್ನುಮೇಲೆ ನೀನು ಸ್ವತಂತ್ರವಾಗಿ ಏನೂ ಮಾಡದೆ, ನಾನು ಮಾಡಿದಂತೆಯೇ ಮಾಡಬೇಕು. ತಿಳಿಯಿತೇ? ಇಲ್ಲದಿದ್ದರೆ ಸಿಕ್ಕಿಬೀಳುವೆ" ಎಂದ. ಬೇಟ ಒಪ್ಪಿದ.

ಆ ರಾತ್ರಿ ಇಬ್ಬರೂ ಸಾಹುಕಾರ ಮಂಚೇಗೌಡನ ಮನೆಗೆ ಕನ್ನ ಹಾಕಲು ಹೊರಟರು. ಕಾರಿರುಳು, ಎಲ್ಲಾ ಮಲಗಿದ್ದರು. ತೋಟ ಕನ್ನ ಹಾಕಿದ. ಇಬ್ಬರೂ ಸಾವಧಾನದಿಂದ ಒಳನುಗ್ಗಿದರು. ಕಣ್ಣುಕಾಣಿಸದೆ ತಡವರಿಸುತ್ತಾ ಹೋಗಿ ಹಣ, ಒಡವೆಗಳ ಪೆಟ್ಟಿಗೆಯೆಲ್ಲಿದೆಯೋ ಕಂಡುಹಿಡಿದರು. ಇನ್ನೇನು ತೆಗೆದುಕೊಳ್ಳಬೇಕೆನ್ನುವಷ್ಟರಲ್ಲಿ ತೋಟನ ಕಾಲು ಅಲ್ಲಿ ಗೋಡೆಗೆ ಒರಗಿಸಿದ್ದ ಮರದಮಣೆಗೆ ತಾಗಿ ಧಡೀರನೆ ಉರುಳಿತು. ದೊಡ್ಡ ಶಬ್ದವಾಯಿತು. ಇದನ್ನು ಕೇಳಿ ಮಲಗಿದ್ದ ಮಂಚೇಗೌಡನಿಗೆ ಎಚ್ಚರವಾಯಿತು. ಹಾಸಿಗೆಯಿಂದಲೇ 'ಯಾರದು?' ಎಂದುಕೂಗಿದ. ಕೂಡಲೇ ತೋಟ ಬೆಕ್ಕಿನಂತೆ "ಮ್ಯಾಂವ್, ಮ್ಯಾಂವ್" ಎಂದ. 'ಸರಿ, ಹಾಳು ಬೆಕ್ಕಿರಬೇಕು' ಎಂದು ಗೌಡ ಕಂಬಳಿಎಳೆದುಕೊಂಡು ನಿದ್ದೆಹೋದ.

ತೋಟ ಪೆಟ್ಟಿಗೆ ತೆಗೆದು ಎಲ್ಲಾ ಗಂಟುಕಟ್ಟಿದ. ಬೇಟನೂ ಸಹಾಯಕ್ಕೆ ಬಂದ. ಈಸಲ ಬೇಟನ ಕಾಲು ಅದೇ ಮಣೆಯನ್ನು ಎಡವಿತು. ಪುನಃ ಶಬ್ದವಾಯಿತು. ಗೌಡನಿಗೆ ಪುನಃ ಎಚ್ಚರವಾಯಿತು. "ಯಾರದು" ಎಂದು ಗಟ್ಟಿಯಾಗಿ ಕೂಗಿದ ಗೌಡ ಏಳುತ್ತಾ. ಬೇಟ ಗಾಬರಿಯಾಗಿ "ಎರಡನೇ ಬೆಕ್ಕು" ಎಂದು ಉತ್ತರ ಕೊಟ್ಟ.

ಸರಿ ಇನ್ನೇನು? ಗೌಡ ಗಲಾಟೆ ಎಬ್ಬಿಸಿ ಆ 'ಬೆಕ್ಕು'ಗಳಿಬ್ಬರನ್ನೂ ಹಿಡಿದು ಪೋಲೀಸಿಗೆ ಕೊಟ್ಟ.

—'ಭಗೀರಥ'




ಒಂದಾನೊಂದು ಕಾಲದಲ್ಲಿ ಘೂರ್ಜರ ದೇಶವನ್ನು ಉಗ್ರಸೇನನೆಂಬ ರಾಜನು ಆಳುತ್ತಿದ್ದನು. ಆತನು ತನಗಿದ್ದಷ್ಟು ರಾಜ್ಯದಿಂದ ತೃಪ್ತಿಪಡದೆ, ಸುತ್ತಮುತ್ತಲಿರುವ ರಾಜ್ಯಗಳ ಮೇಲೆ ದಂಡೆತ್ತಿಹೋಗಿ, ಅವುಗಳೆಲ್ಲವನ್ನೂ ತನ್ನ ರಾಜ್ಯಕ್ಕೆ ಸೇರಿಸಿಕೊಂಡು 'ಚಕ್ರವರ್ತಿ' ಎಂದು ಎಲ್ಲರಿಂದಲೂ ಕರೆಯಿಸಿಕೊಳ್ಳುತ್ತಿದ್ದನು. ತನ್ನ ಅಧೀನಕ್ಕೆ ಬಂದ ರಾಜರನ್ನೂ, ಪ್ರಜೆಗಳನ್ನೂ ಅನೇಕವಿಧವಾಗಿ ಹಿಂಸೆಪಡಿಸಿ, ದುರುಳನೆನ್ನಿಸಿಕೊಂಡನು. ಅಲ್ಲಿಗೇ ಸುಮ್ಮನಾಗದೆ, ಪ್ರತಿ ಪಟ್ಟಣದ ಮುಖ್ಯ ಬೀದಿಯಲ್ಲೂ ಒಂದು ಸ್ತಂಭವನ್ನು ನಿರ್ಮಿಸಿ, ಆ ಸ್ತಂಭದ ತುದಿಯಲ್ಲಿ ತನ್ನ ಹೆಸರು ಕೆತ್ತಿದ ಕಿರೀಟವನ್ನು ಇಟ್ಟು, ಅತ್ತಕಡೆ ಬಂದು ಹೋಗುವವರೆಲ್ಲಾ ಆ ಕಿರೀಟಕ್ಕೆ ನಮಸ್ಕಾರ ಮಾಡಿ ಹೋಗಬೇಕೆಂದು ಆಜ್ಞೆಮಾಡಿದನು.

ಅದುವರೆವಿಗೂ ಸ್ವತಂತ್ರವಾಗಿ ಬಾಳುತಿದ್ದ ಜನರಿಗೆ ಇದು ತುಂಬಾ ಅವಮಾನಕರವಾಗಿ ಕಾಣಿಸಿತು. ಆದರೆ ವಿಧಿಯಿಲ್ಲದೆ ಆ ಕಡೆ ಹೋಗಬೇಕಾಗಿಬಂದಾಗಲೆಲ್ಲಾ ಆ ಕಿರೀಟಕ್ಕೆ ತಲೆಬಾಗಿ ನಮಸ್ಕಾರ ಮಾಡಿ ಹೋಗುತ್ತಿದ್ದರು.

ಆ ಕಾಲದಲ್ಲಿ ವಿಂಧ್ಯಾರಣ್ಯದಲ್ಲಿ ಗಂಡಾ ಎಂಬ ಒಬ್ಬ ಭಿಲ್ಲನಿದ್ದನು. ಆತನು ಏಕಲವ್ಯನನ್ನು ಮೀರಿಸಿದ ಬಿಲ್ಲುಗಾರ. ಆತ ಬಾಣಬಿಟ್ಟನೆಂದರೆ ಗುರಿತಪ್ಪುವ ಸಂಭವವೇ ಇಲ್ಲ. ಆತನು ಒಂದು ದಿನ ತನ್ನ ಹತ್ತುವರ್ಷ ಮಗನೊಂದಿಗೆ ಸಮೀಪದಲ್ಲಿದ್ದ ಒಂದು ಪಟ್ಟಣಕ್ಕೆ ಹೋದನು.

ಆ ಊರಿನ ಅಂಗಡಿ ಬೀದಿಯ ಹತ್ತಿರ ಒಂದು ಸ್ತಂಭದ ಮೇಲೆ ಕಿರೀಟವೊಂದಿತ್ತು. ಅತ್ತ ಕಡೆ ಸುಳಿದಾಡುವವರೆಲ್ಲಾ ಮೈಬಗ್ಗಿಸಿ ನಮಸ್ಕಾರಮಾಡಿ ಹೋಗುತ್ತಿದ್ದುದನ್ನು ಆ ಬಿಲ್ಲುಗಾರ ಕಂಡು, ವಿಷಯವನ್ನು ಸೂಕ್ಷ್ಮವಾಗಿ ಗ್ರಹಿಸಿದ. ಎಲ್ಲರಂತೆ ತಾನುಮಾತ್ರ ನಮಸ್ಕಾರ ಮಾಡದೆ ಠೀವಿಯಿಂದ ಮುಂದಕ್ಕೆ ನಡೆದುಬಿಟ್ಟ.

ಆದರೆ ಹತ್ತು ಹೆಜ್ಜೆ ಮುಂದಿಟ್ಟನೋ ಇಲ್ಲವೋ ಸ್ತಂಭದಹತ್ತಿರ ಕಾವಲು ಇದ್ದ ಜವಾನರು ಬಂದು ಗಂಡಾಭಿಲ್ಲನನ್ನೂ, ಅವನ

ಲಕ್ಷ್ಮಣಸಿಂಗ - ನಾಗಪುರ.



ಮಗನನ್ನೂ ಹಿಡಿದುಕೊಂಡು ಹೋಗಿ ಚಕ್ರವರ್ತಿಮುಂದೆ ನಿಲ್ಲಿಸಿದರು.

"ಯಾರೋ, ನೀನು? ತ್ರಿಮೂರ್ತಿಗಳಿಗೂ ನನ್ನ ಆಜ್ಞೆಯನ್ನು ಧಿಕ್ಕರಿಸಲು ಸಾಧ್ಯವಿಲ್ಲದಿರುವಾಗ, ನೀನು ಉದ್ಧಟವಾಗಿ ವರ್ತಿಸಿರುವೆಯಂತೆ, ಹಾಂ" ಎಂದು ದರ್ಪದಿಂದ ನುಡಿದ ಚಕ್ರವರ್ತಿ.

"ನನ್ನ ಹೆಸರು ಗಂಡಾಭಿಲ್ಲ. ಆಡವಿಯಲ್ಲಿರುವ ಸಿಂಹದಂತೆ ಸ್ವೇಚ್ಛೆಯಾಗಿ ಓಡಾಡುವವ ನಾನು. ಯಾರೋ ಒಬ್ಬ ರಾಜನ ಕಿರೀಟಕ್ಕೆ ತಲೆ ಬಾಗಿಸಬೇಕಾದ ಅಗತ್ಯವಾದರೂ ಏನಿದೆ?" ಎಂದು ಮಾರುಪ್ರಶ್ನೆ ಹಾಕಿದ ಆ ಭಿಲ್ಲ.

"ಓಹೋ, ನೀನೇಯೋ ಗಂಡಾಭಿಲ್ಲ. ನಿನ್ನಗುರಿ ಎಂದೂ ತಪ್ಪುವುದಿಲ್ಲವೆಂದು ಕೇಳಿದ್ದೇನೆ. ಎಲ್ಲಿ ನಿನ್ನ ಸಾಮರ್ಥ್ಯವನ್ನು ನನಗೊಂದುಸಾರಿ ತೋರಿಸು." ಎಂದು ಹೇಳಿ ಚಕ್ರವರ್ತಿ, ಪಕ್ಕದಲ್ಲಿದ್ದ ಸೇವಕರೊಂದಿಗೆ 'ಒಂದು ಸೀಬೆಹಣ್ಣನ್ನು ತೆಗೆದುಕೊಂಡು ಬನ್ನಿ" ಎಂದು ಆಜ್ಞೆ ಮಾಡಿದ.

ಹಣ್ಣನ್ನು ತಂದಕೂಡಲೇ 'ಗಂಡಾಭಿಲ್ಲನ ಪಕ್ಕದಲ್ಲಿರುವ ಅವನ ಮಗನನ್ನು ಕರೆದುಕೊಂಡು ಹೋಗಿ ಅದೋ ಅಲ್ಲಿರುವ ಗಿಡಕ್ಕೆ ಕಟ್ಟಿನಿಲ್ಲಿಸಿ, ಆ ಸೀಬೆಹಣ್ಣನ್ನು ಆ ಹುಡುಗನ ತಲೆಮೇಲಿಡಿ' ಎಂದ ಚಕ್ರವರ್ತಿ.

ಆ ರೀತಿ ಮಾಡಿದ ತರುವಾಯ ಉಗ್ರಸೇನನು ಗಂಡಾಭಿಲ್ಲನೊಂದಿಗೆ 'ನಿನ್ನ ಮಗನ ತಲೆಯಮೇಲಿರುವ ಸೀಬೆಹಣ್ಣನ್ನು ಗುರಿನೋಡಿ ಬಾಣದಿಂದ ಹೊಡೆಯಬೇಕು. ಗುರಿಯನ್ನು ತಪ್ಪದೆ ಹೊಡೆದೆಯೋ, ನಿನ್ನ ಅಪರಾಧವನ್ನು ಮನ್ನಿಸಿ, ನಿನ್ನನ್ನೂ, ನಿನ್ನ ಮಗನನ್ನೂ ಕ್ಷಮಿಸಿ ಸ್ವೇಚ್ಛೆಯಾಗಿ ತಿರುಗಾಡಲು ಬಿಡತ್ತೇನೆ' ಎಂದ.

ಆ ಮಾತುಗಳನ್ನು ಕೇಳಿದ ಕೂಡಲೇ ಗಂಡಾಭಿಲ್ಲನ ಎದೆ ಝಲ್ಲೆಂದಿತು. ಮೈಯೆಲ್ಲಾ ಬೆವರಿತು. ಕೋಪದಿಂದ ಹಲ್ಲು ಕಟಕಟನೆ ಕಡಿಯುತ್ತಾ 'ರಾಜನೇ, ನೀನೆಷ್ಟು ಕ್ರೂರಿ? ಸ್ವಲ್ಪ ಗುರಿತಪ್ಪಿ ಬಾಣ ಕೆಳಗೆ ಹೋಯಿತೆಂದರೆ ನನ್ನ ಮಗನನ್ನು ಕೈಯಾರ ಕೊಂದಂತೆ ಆಗುವುದಲ್ಲಾ! ನನ್ನ ಪ್ರಾಣ ಹೋದರೂ ನಾನೀ ಕೆಲಸ ಮಾಡಲಾರೆ' ಎಂದ.

ರಾಜನು ಪಕಪಕನೆ ನಗುತ್ತಾ 'ನನ್ನ ಆಜ್ಞೆ ನೆರವೇರಿಸದಿದ್ದರೆ ನಿನಗೆ ಮರಣಶಿಕ್ಷೆ ತಪ್ಪುವಂತಿಲ್ಲ. ಆದರೆ ನಿನ್ನ ಕಣ್ಣುಮುಂದೆ ನಿನ್ನ ಮಗನನ್ನು ಕೊಂದ ನಂತರವೇ ಆ ಕೆಲಸ ಮಾಡಿಸುತ್ತೇನೆ. ತಿಳಿಯಿತೇ?" ಎಂದ.

ನಿಶ್ಚೇಷ್ಟಿತನಾದ ಗಂಡಾಭಿಲ್ಲ. ಅದನ್ನು ನೋಡಿ ಮಗನು "ಅಪ್ಪಾ, ಭಯವೇಕೆ? ನಿನ್ನ ಗುರಿ ಎಂದೂ ತಪ್ಪುವುದಿಲ್ಲ. ಬಾಣಬಿಡು' ಎಂದು ಧೈರ್ಯಕೊಟ್ಟ.

ಗಂಡಾಭಿಲ್ಲನು ತನ್ನ ಮಗನನ್ನು ಕಟ್ಟಿದ್ದ ಸ್ಥಳದಿಂದ ಇಪ್ಪತ್ತು ಹೆಜ್ಜೆ ಹಿಂದೆ ನಡೆದ. ತನ್ನ ಬತ್ತಳಿಕೆಯಿಂದ ಹರಿತವಾದ ಬಾಣವೊಂದನ್ನು ತೆಗೆದ. ಅದರ ಮೊನೆಯಾದ ಅಲಗು ಬೆಳ್ಳಿಯ ರೇಕಿನಂತೆ ಥಳಥಳನೆ ಹೊಳೆಯುತಿತ್ತು. ಅದನ್ನು ಪರೀಕ್ಷಿಸಿ, ತನ್ನ ಸೊಂಟಕ್ಕೆ ಸಿಕ್ಕಿಸಿಕೊಂಡ. ಬತ್ತಳಿಕೆಯಿಂದ ಮತ್ತೊಂದು ಸಾಮಾನ್ಯವಾದ ಅಂಬನ್ನು ತೆಗೆದು ಹೆದೆಗೇರಿಸಿ ಮಗನ ತಲೆಯಮೇಲಿದ್ದ ಹಣ್ಣಿಗೆ ಗುರಿನೋಡಿ ಬಿಟ್ಟ. ಆ ಬಾಣ ರೊಯ್ಯನೆ ಹೋಗಿ ಆ ಹಣ್ಣನ್ನು ಅರ್ಧಕ್ಕೆ ಕತ್ತರಿಸಿ ಮರಕ್ಕೆ ತಗಲಿಕೊಂಡಿತು.

ಅದನ್ನು ನೋಡಿ ಉಗ್ರಸೇನ "ಶಹಬಾಷ್" ಎಂದು ಮೆಚ್ಚಿಕೆಯಿಂದ ಚಪ್ಪಾಳೆ ತಟ್ಟಿದ. ತನ್ನ ಆಸ್ಥಾನಬಿಲ್ಲುಗಾರರಕಡೆ ತಿರುಗಿ 'ನೀವೂ ಇದ್ದೀರೆ, ಏಕೆ?' ಎಂಬಂತೆ ಒಂದುರೀತಿ ಕೇವಲವಾಗಿ ನೋಡಿದ.

ಈ ರೀತಿ ರಾಜನು ತಮ್ಮನ್ನು ಅವಹೇಳನ



ಮಾಡುವುದನ್ನು ಕಂಡು ಅವರಿಗೆಲ್ಲಾ ತುಂಬಾ ಅವಮಾನವಾಯಿತು. 'ದೇಶಾಭಿಮಾನ ಬಿಟ್ಟು, ಹೊಟ್ಟೆಯಪಾಡಿಗಾಗಿ ಇವನ ಆಸ್ಥಾನದಲ್ಲಿ ಸೇರಿದುದಕ್ಕೆ ಅನವಶ್ಯಕವಾಗಿ ನಮ್ಮನ್ನು ಅವಮಾನ ಪಡಿಸುತ್ತಿರುವನಲ್ಲಾ' ಎಂದುಕೊಂಡರು ಅವರು ಮನಸ್ಸಿನಲ್ಲಿ.

ಚಕ್ರವರ್ತಿಯು ತನ್ನ ವಚನದಂತೆ ಗಂಡಾಭಿಲ್ಲನ ಮಗನ ಬಂಧನ ಬಿಡಿಸಿ, ಅವರಿಬ್ಬರೂ ಇನ್ನು ಸ್ವೇಚ್ಛೆಯಾಗಿ ಹೋಗಬಹುದೆಂದು ಅಪ್ಪಣೆಕೊಟ್ಟನು.

ಗಂಡಾಭಿಲ್ಲ ಹೋಗುವಾಗಲಾದರೂ ಚಕ್ರವರ್ತಿಗೆ ನಮಸ್ಕಾರ ಮಾಡಲಿಲ್ಲ. 'ಎಷ್ಟು ಸೊಕ್ಕು ಇವನಿಗೆ' ಎಂದೆನ್ನಿಸಿತು ಚಕ್ರವರ್ತಿಗೆ. ಆದರೇನು? ಏನೂ ಮಾತನಾಡುವಂತಿಲ್ಲ.

ಗಂಡಾಭಿಲ್ಲ ಹೋಗುತ್ತಿರಲು ಆತನ ಸೊಂಟಕ್ಕೆ ಸಿಕ್ಕಿಸಿಕೊಂಡಿದ್ದ ಬಾಣದ ಅಲಗು ಥಳಥಳನೆ ಹೊಳೆದು ಚಕ್ರವರ್ತಿಯ ಕಣ್ಣಿಗೆ ಬಿತ್ತು.

"ಅಯ್ಯಾ ಗಂಡಾಭಿಲ್ಲ, ನಿಲ್ಲು. ಆಗಲೇ ಕೇಳೋಣವೆಂದಿದ್ದೆ. ಮೊದಲು ತೆಗೆದ ಆ ಬಾಣದ ಅಲಗನ್ನು ಪರೀಕ್ಷಿಸಿ, ಉಪಯೋಗಿಸದೆ ಸೊಂಟದಲ್ಲೇಕೆ ಸಿಕ್ಕಿಸಿಕೊಂಡೆ?" ಎಂದು ಕೇಳಿದ ಚಕ್ರವರ್ತಿ.

ಗಂಡಾಭಿಲ್ಲನು "ಏಕೆಗೊತ್ತೇ? ಒಂದು ವೇಳೆ ನನ್ನ ಬಾಣ ಗುರಿತಪ್ಪಿ ನನ್ನ ಮಗನ ಪ್ರಾಣ ಹಾರಿ ಹೋಗಿದ್ದರೆ, ಈ ಬಾಣ ನಿನ್ನ ಎದೆಯನ್ನು ಸೇರುತಿತ್ತು!" ಎಂದು ಅಂಜಿಕೆಯಿಲ್ಲದೆ ನುಡಿದ.

ಉಗ್ರಸೇನ ಉಗ್ರವಾಗಿ "ಏನೆಂದೆ? ನನ್ನ ಪ್ರಾಣ ತೆಗೆಯುವೆಯಾ?" ಎಂದು ತನ್ನ ನೌಕರರಕಡೆ ತಿರುಗಿ "ಏನು ನೋಡುತ್ತಿದ್ದೀರಿ, ಹಿಡಿಯಿರಿ ಈ ರಾಜದ್ರೋಹಿ...." ಎಂದು ಮಾತನ್ನು ಪೂರ್ತಿ ಹೇಳುವ ಮೊದಲೇ ಗಂಡಾಭಿಲ್ಲ ತನ್ನ ಸೊಂಟದಲ್ಲಿ ಸಿಕ್ಕಿಸಿಕೊಂಡಿದ್ದ ಬಾಣ ತೆಗೆದು ಚಕ್ರವರ್ತಿಯ ಎದೆಗೆ ಗುರಿಯಿಟ್ಟು ಹೊಡೆದ. 'ಅಯ್ಯೋ' ಎಂದು ಕುಸಿದುಬಿದ್ದ ರಾಜ.

ಆಗ ಚಕ್ರವರ್ತಿಯ ಅನುಚರರು 'ಹಿಡಿಯಿರಿ, ಹಿಡಿಯಿರಿ' ಎಂದು ಗಂಡಾಭಿಲ್ಲನಕಡೆ ಓಡಿದರು. ಆದರೆ ಅಲ್ಲಿದ್ದ ದೇಶಭಕ್ತ ವೀರರೂ ಜನರೂ ಆ ಪರದೇಶದ ಭಟರನ್ನು ತಡೆದು 'ಒಂದು ಹೆಜ್ಜೆ ಯಿಟ್ಟರೆ ನಿಮ್ಮಗತಿ ನೆಟ್ಟಗಾಗುವುದಿಲ್ಲ, ಹುಷಾರ್' ಎಂದರು. ಅದನ್ನು ಕೇಳಿ ಆ ರಾಜಭಟರು ಪಲಾಯನ ಮಾಡಿದರು.

"ಮಹಾನುಭಾವ, ! ಈ ಲೋಕಕಂಟಕನನ್ನು ಕೊಂದು ನಮಗೆ ಅವನ ಉಪದ್ರವದಿಂದ ಉಳಿಸಿದೆ." ಎಂದು ಪ್ರಜೆಗಳೆಲ್ಲಾ ಗಂಡಾಭಿಲ್ಲನನ್ನು ಪರಿಪರಿವಿಧದಲ್ಲಿ ಸ್ತುತಿಸಿದರು. ಅಂದಿನವರೆವಿಗೂ ಉಗ್ರಸೇನನ ಕಿರೀಟಕ್ಕೆ ಒತ್ತಾಯಪೂರ್ವಕವಾಗಿ ನಮಸ್ಕಾರ ಮಾಡ ಬೇಕಾಗಿದ್ದವರೆಲ್ಲಾ ಗಂಡಾಭಿಲ್ಲನಿಗೆ ಹೃದಯ ಪೂರ್ವಕವಾಗಿ ಭಕ್ತಿಗೌರವದಿಂದ ನಮಸ್ಕಾರ ಮಾಡಿದರು.





## 2

ಪ್ರಜೆಗಳೆಲ್ಲರೂ ಗಂಟೆ ಸ್ತಂಭದ ಹತ್ತಿರಕ್ಕೆ ಓಡಿಬಂದು ಗಂಟೆಗಳನ್ನು ಎಣಿಸುತ್ತಿದ್ದರೆಂದು ಹೇಳಿದೆವಷ್ಟೆ. ಆದರೆ ಇಷ್ಟರಲ್ಲಿ ರಾಣಿಯ ಮರಣದ ವಾರ್ತೆ ಗಂಟೆಸ್ತಂಭವನ್ನು ಮುಟ್ಟಿದ್ದಾದರೂ ಹೇಗೆ? ಸತ್ಯ ಸುಡಿಯಬೇಕೆಂದರೆ ರಾಣಿ ತೀರಿಕೊಂಡ ವಿಷಯ ಆ ಒಬ್ಬ ವೃದ್ಧಳಿಗಲ್ಲದೆ ಬೇರೊಂದು ಹುಳಕ್ಕೂ ಸಹ ತಿಳಿಯದು. ಅಷ್ಟೇ ಅಲ್ಲ. ಗಂಟೆಸ್ತಂಭದ ಹತ್ತಿರ ಇರುವ ಕಾವಲುಗಾರನೂ ಸಹ ಅಂದು ಎಲ್ಲರೊಂದಿಗೆ ದರ್ಬಾರಿನಲ್ಲೇ ಇದ್ದಾನೆ.

ಗಂಟೆ ಶಬ್ದ ಕೇಳಿಸಿದ ಕೂಡಲೇ, ಗಂಟೆ ಸ್ತಂಭವನ್ನು ಕಾಯುವ ಪಹರೆಯವನೂ ಸಹ ತಲ್ಲಣಿಸಿದ. ಯಾರೋ ಹುಡುಗಾಟಕೆಗೆ ಗಂಟೆ ಬಾರಿಸುತ್ತಿರಬೇಕು; ಒಂದು ಕ್ಷಣ ವಿಲಂಬ ಮಾಡಿದರೂ ರಾಜ್ಯದಲ್ಲೆಲ್ಲಾ ಅಲ್ಲೋಲ ಕಲ್ಲೋಲವುಂಟಾಗಬಹುದು - ಎಂದುಕೊಂಡು ಸರ್ರನೆ ಓಡಿ ಸೇರಿಕೊಂಡ ಗಂಟೆ ಸ್ತಂಭವನ್ನು. ಅಲ್ಲಿ ಹೋಗಿ ನೋಡಿದರೆ ಒಬ್ಬ ವೃದ್ಧಳು ಗಂಟೆ ಬಾರಿಸುತ್ತಿದ್ದಾಳೆ. ಆದರೆ ಆಗಾಗಲೇ ಆಕೆ ಮುವತ್ತೊಂಬತ್ತು ಸಾರಿ ಗಂಟೆ ಬಾರಿಸುವುದೂ, ಪ್ರಜಾಸಮುದಾಯವೆಲ್ಲಾ ಅಲ್ಲಿಗೆ ಬಂದು ಸೇರುವುದೂ ನಡೆದು ಹೋಗಿತ್ತು. ಇಂತಹ ವಿಪರೀತ ಅವಸ್ಥೆಗೆ ಕಾರಣಳಾದ ಆ ವೃದ್ಧಳನ್ನು ಹಿಡಿದು ಅಲ್ಲೇ ಸೀಳಿಬಿಡಬೇಕೆಂದು ಮನಸ್ಸಾಯಿತು ಆ ಪಹರೆಯವನಿಗೆ. ಆಕೆಯನ್ನು ಹಿಡಿಯಲು ಹೋದ. ಆದರಾವೃದ್ಧಳು ಅದೃಶ್ಯರೂಪತಾಳಿ ಹಾರಿ ಹೋದಳು.

ಕಾವಲುಗಾರ ಗಡಗಡ ನಡುಗಿದ. ರಾಣಿ ಮರಣವಾದಳೇ? ಇದನ್ನು ನಂಬುವುದಾದರೂ ಹೇಗೆ? ಈ ಸುದ್ದಿ ಜನಗಳಲ್ಲಿ ಹರಡುವ ಮೊದಲೇ ನಿಜಾನಿಜಗಳನ್ನು ತಾನು ತಿಳಿದುಕೊಳ್ಳಬೇಕು! ಈ ರೀತಿನಿರ್ಧರಿಸಿ, ಅಲ್ಲಿ ನೆರೆ



ಆಂದರೆ ಮರಣಗಂಟೆಗಳು ಬಾರಿಸುತ್ತಿರುವಾಗಲೇ ಆತನ ಎದೆ ಡವಡವನೆಂದು ಬಡಿದುಕೊಳ್ಳುತಿತ್ತು. ಒಂದೋಂದು ಗಂಟೆ ಬಾರಿಸಿದಾಗ ತನ್ನ ಎದೆಯಮೇಲೆ ಯಾರೋ ಸುತ್ತಿಗೆಯಿಂದ ಏಟುಹೊಡೆದಂತೆ ಭಾಸವಾಗುತಿತ್ತು. ಮೂವತ್ತೊಂಬತ್ತನೇ ಗಂಟೆ ಬಾರಿಸಿದ ಕೂಡಲೇ ರಾಜನು ಕುಳಿತಿದ್ದವನು ಕುಳಿತಂತೆಯೇ ಮೂರ್ಛೆಹೋದಿದನು. ನಾಮಕರಣ ಮಹೋತ್ಸವಕ್ಕೆ ಬಂದ ಇತರ ರಾಜರ ಹೊರತು, ಮಿಕ್ಕವರೆಲ್ಲಾ ವಿಷಯವರಿಯುವ ಕುತೂಹಲದಿಂದ ಚಲ್ಲಾಪಿಲ್ಲಿಯಾಗಿ ತೋರಿದೆಡೆಗೆ ಓಡಿದರು. ಮಂತ್ರಿ ಇತರರು 'ನಮಗೆ ತಿಳಿಯದೆ ಏನೋ ತಪ್ಪು ಅಥವಾ ಕೃತ್ರಿಮ ನಡೆದಿರಬೇಕು ಎಂದುಕೊಂಡು ಗಂಟೆಸ್ತಂಭದ ಹತ್ತಿರಕ್ಕೆ ಓಡಿ ಬಿಟ್ಟಿದ್ದರು.

ಗಂಟೆಗಳ ವಿಷಯ ತಿಳಿದಕೂಡಲೇ ಅವರಿಗೆ ರಾಜನ ಸಂಗತಿ ಜ್ಞಾಪಕಕ್ಕೆ ಬಂತು. 'ಅಯ್ಯೋ, ಎಲ್ಲರೂ ಇಲ್ಲಿಯೇ ಇರುವೆವಲ್ಲಾ. ಮಹಾರಾಜ ಏನಾದರೋ, ಏನೋ' ಎಂದು ನುಡಿದ ಶಕ್ತಿಸಿಂಹ ದುಗುಡದಿಂದ.

'ಹೌದು ಇದು ತುಂಬಾ ಶೋಚನೀಯವಾದ ಸಮಯ. ಭಾನಂದಿರು ದರ್ಬಾರಿನಲ್ಲೇ ಇದ್ದುಬಿಟ್ಟಿರಬೇಕು. ನೀವು ಹೋಗಿ ಅವರನ್ನು ವಿಚಾರಿಸಿಕೊಳ್ಳುತ್ತಿರಿ. ಒಂದೇ ಒಂದು ಕ್ಷಣದಲ್ಲಿ ನಾನು ಬರುತ್ತೇನೆ' ಎಂದ ಮಂತ್ರಿ.

ಶಕ್ತಿಸಿಂಹ ಹೊರಟ. ಆತನ ಹಿಂದೆಯೇ ಮಿಕ್ಕಪರಿವಾರವೂ, ಅವರೊಂದಿಗೆ ಆಸ್ಥಾನ

ದಿದ್ದ ಗುಂಪನ್ನು ತಳ್ಳಿಕೊಂಡು ಓಡಿ ಹೋಗಿ ಅಂತಃಪುರವನ್ನು ಸೇರಿಕೊಂಡ. ರಾಣಿ ಚಿರ ನಿದ್ರೆಯಲ್ಲಿರುವುದನ್ನು ಕಂಡು ಸ್ತಬ್ಧನಾದ. ಕಣ್ಣೀರು ಜೊಳ ಜೊಳನೆ ಸುರಿಯಿತು. ಭಾರವಾದ ಹೆಜ್ಜೆಯಿಡುತ್ತಾ ಆ ಕೋಣೆಯಿಂದ ಹೊರಬಿದ್ದ.

ಆ ವೇಳೆಗಾಗಲೇ ಗಂಟೆ ಸ್ತಂಭದ ಹತ್ತಿರ ಸೇರಿದ್ದವರೆಲ್ಲಾ ಅಂತಃಪುರದ ಹತ್ತಿರಬಂದು ನೆರೆದರು. ರಾಣಿಯ ಶಯ್ಯಾಗಾರದಿಂದ ದುಃಖ ಸಮುದ್ರದಲ್ಲಿ ಮುಳುಗಿ ನಿಧಾನವಾಗಿ ಬರುತ್ತಿದ್ದ ಕಾವಲುಗಾರನನ್ನು ನೋಡಿದ ಕೂಡಲೇ ವಿಷಯವನ್ನು ಗ್ರಹಿಸಿದರು. ಅಂತಃಪುರವೆಲ್ಲಾ 'ರಾಣಿ' 'ರಾಣಿ' ಎಂಬ ಪ್ರಲಾಪದಿಂದ ಪ್ರತಿಧ್ವನಿಸಿತು.

ಇನ್ನು ಅಲ್ಲಿ ರಾಜನ ಪರಿಸ್ಥಿತಿ ಹೇಗಿತ್ತು

ವೈದ್ಯನೂ, ದಾದಿಯೂ, ಸಹ ಹೊರಡಲು ಸಿದ್ಧರಾದರು. ಮಂತ್ರಿ ಅವರಿಬ್ಬರು ಹೋಗುತ್ತಿರುವುದನ್ನು ಕಂಡು 'ನಿಲ್ಲಿ. ನಿಲ್ಲಿ' ಎಂದು ಅಧಿಕಾರವಾಣಿಯಿಂದ ನುಡಿದ.

ಆಸ್ಥಾನ ವೈದ್ಯ ಮತ್ತು ದಾದಿ ದಂಗಾದರು. ಮಂತ್ರಿ ಭಟರನ್ನು ಕುರಿತು "ಇವರಿಬ್ಬರನ್ನು ಬೇರೆ ಬೇರೆ ಕೋಣೆಗಳಲ್ಲಿ ಬಂಧಿಸಿಡಿ" ಎಂದು ಆಜ್ಞಾಪಿಸಿದ. ಭಟರು ಅವರನ್ನು ಅಲ್ಲಿಂದ ಕರೆದುಕೊಂಡು ಹೋದರು.

ತಕ್ಷಣವೇ ರಾಣಿಯ ಶಯ್ಯಾಗಾರಕ್ಕೆ ಬೀಗ ಹಾಕಿಸಿ, ದರ್ಬಾರನ್ನು ಸೇರಿಕೊಂಡ ಮಂತ್ರಿ. ಮಹಾರಾಜನನ್ನು ಪರಿಪರಿ ವಿಧದಲ್ಲಿ ಸಮಾಧಾನಪಡಿಸಲು ಪ್ರಯತ್ನಿಸಿದ. ಎಷ್ಟೇ ಹೇಳಿದರೂ ರಾಜನ ದುಃಖ ಶಮನವಾಗಲಿಲ್ಲ. "ಮಂತ್ರಿ, ರಾಣಿಯೊಂದಿಗೇ ತೀರಿತು ನನ್ನ ಬದುಕು. ಅಪರೂಪವಾಗಿ ಜನಿಸಿದ ಮಗುವನ್ನು ಲಾಲಿಸಿ, ಪಾಲಿಸಲಾರದೆ ಕಣ್ಣುಮುಚ್ಚಿದಳು ರಾಣಿ. ದರಿದ್ರ ದೇಶಾಚಾರ! ತಲೆಗೊಂದು ಹೆಸರು ಬರೆದುಕೊಂಡು ಬರುವುದಂತೆ! ಯಾರು ಬರೆದುಕೊಂಡು ಬಂದ ಹೆಸರಿನಲ್ಲಿ ಯಾವ ಆಪತ್ತಿಯಿತ್ತೋ ಏನೋ ಹಾಳು; ಮಗುವಿಗೆ ತಾಯಿಯ ಗಂಡಾಂತರ ಒದಗಿತು. ನನ್ನ ರಾಣಿ ಸತ್ತುಹೋದಳು' ನನ್ನ ಮಗನಿಗೆ ಯಾರೂ ಹೆಸರಿಡಬೇಕಾಗಿಲ್ಲ. ದೇಶಾಚಾರವೇ ಅಲ್ಲ, ಆ ದೇವನ ಆಜ್ಞೆಯಾದರೂ ಉಲ್ಲಂಘಿಸುವೆನು. ನಮ್ಮ ರಾಜಕುಮಾರನಿಗೆ ರಾಣಿಯ ಹೆಸರೇ ಇಡಿ. ನನ್ನ



ರಾಣಿ ದೇವ ಪ್ರಿಯೆ. ನನ್ನ ಮಗನ ಹೆಸರು ದೇವಸಿಂಹ–ಏನು ಮಂತ್ರಿ, ಮಾತು ಪಾಲಿಸುವೆಯಾ?" ಎಂದು ಹೇಳಿ ಸುಮ್ಮನಾದ.

ಅದಕ್ಕೆ ಮಂತ್ರಿ "ಅಗತ್ಯವಾಗಿ ಪಾಲಿಸುವೆನು, ಪ್ರಭೂ. ದೇವಸಿಂಹ....ಸುಂದರವಾದ ಹೆಸರು. ನಮ್ಮ ಆ ತಾಯಿಯನ್ನು ಸ್ಮರಿಸುವುದಕ್ಕಿಂತಲೂ ನಮಗೆ ಬೇಕಾದುದಾದರೂ ಏನಿದೆ? ಈ ಹೆಸರು ಹಿಡಿದುಕೊಗಲು ಎಲ್ಲರೂ ಸಂತೋಷಿಸುವರು." ಎಂದು ರಾಜನನ್ನು ಸಮಾಧಾನಪಡಿಸಿದ.

ಇಲ್ಲಿ ಮಂತ್ರಿ ಮತ್ತು ರಾಜನು ಸಂಭಾಷಿಸುತ್ತಿರುವಾಗ ಶಕ್ತಿಸಿಂಹ ಅರಮನೆಗೆ ಹೊರಟ. ಅಲ್ಲಿಗೆ ಹೋದಕೂಡಲೇ ಆತನಿಗೆ ವೃದ್ಧಳ ವರ್ತನೆ, ವೈದ್ಯ ಮತ್ತು ದಾದಿಯರ ಬಂಧನ, ರಾಣಿಯ ಶಯ್ಯಾಗಾರಕ್ಕೆ ಬೀಗ



ಹಾಕಿರುವ ವಿಷಯ ತಿಳಿಯಿತು. ತೀವ್ರವಾಗಿ ಆಲೋಚಿಸಿ ದಾದಿಯನ್ನು ಬಂಧಿಸಿದ್ದ ಸ್ಥಳಕ್ಕೆ ಹೋದ.

ದಾದಿಯನ್ನು ಕಂಡು "ದಾದಿ, ಕತೆ ಅಡ್ಡ ತಿರುಗಿತು. ನೆನೆಸಿದ್ದ ಉದ್ದೇಶಗಳೆಲ್ಲಾ ತಾರುಮಾರಾದವು. ನಿನ್ನನ್ನು ವಿಚಾರಣೆಗೆ ಗುರಿ ಮಾಡಬಹುದು. ನಿನ್ನನ್ನು ದೋಷಿಯೆಂದು ಅವರು ತೀರ್ಮಾನಿಸಲೂ ಬಹುದು. ನಿನಗೆ ಮರಣಶಿಕ್ಷೆ ವಿಧಿಸಲೂಬಹುದು. ಭಯಪಡಬೇಡ. ನಿನ್ನ ಪ್ರಾಣಕ್ಕೆ ನನ್ನಪ್ರಾಣ ಕೊಡುತ್ತೇನೆ. ನಿಜಮಾತ್ರ ನುಡಿಯಬೇಡ." ಎಂದು ಧೈರ್ಯ ಹೇಳಿದ.

ಸಂಪ್ರದಾಯದಂತೆ ರಾಣಿಯ ಉತ್ತರ ಕ್ರಿಯಗಳೆಲ್ಲಾ ನಡೆದವು.

ಎರಡುದಿನಗಳಾದ ತರುವಾಯ ಮಂತ್ರಿ ಆಸ್ಥಾನ ವೈದ್ಯನನ್ನೂ, ದಾದಿಯನ್ನೂ ದರ್ಬಾರಿಗೆ ಕರೆಯಿಸಿದ. ವಿಚಾರಣೆ ನೋಡಲು ಬಂದಿದ್ದ ಜನಸಮೂಹದಿಂದ ದರ್ಬಾರು ಕಿಕ್ಕಿರಿದಿತ್ತು. ಮೊಟ್ಟಮೊದಲು ಮಂತ್ರಿ ಆಸ್ಥಾನ ವೈದ್ಯನನ್ನೂ ವಿಚಾರಿಸಿದ. ಅದಕ್ಕೆ ಆಸ್ಥಾನ ವೈದ್ಯನು:

"ಮಂತ್ರಿ ಪುಂಗವನೇ, ಹೆತ್ತ ತಾಯಿಯಂತಹ ದೇವಪ್ರಿಯೆಯ ವಿಷಯದಲ್ಲಿ ಈರೀತಿ ನಡೆದಿರುವುದು ತುಂಬಾ ಸೋಜಿಗವಾಗಿದೆ. ನಿಮಗಿಂತಲೂ ನಾನು ಹೆಚ್ಚು ದುಃಖಿಸುತ್ತಿರುವೆನು. ನಿಮಗಿಂತಲೂ ಅಮಿತ ಆಶ್ಚರ್ಯ ಪಡುತ್ತಿರುವೆನು. ಇದರಲ್ಲಿ ಏನೋ ಮೋಸ ನಡೆದಿರಲೇಬೇಕೆಂದು ನನಗೆ ಸಂಶಯವಿದೆ. ಇದು ಖಂಡಿತ. ದೇವಿಯ ಮರಣಕ್ಕೂ, ಪ್ರಜೆಗಳಿಗೂ ಉಚಿತವಾದ ಉತ್ತರ ಕೊಡಬೇಕಾದ ಬಾಧ್ಯತೆ ನಿಮಗಿಂತಲೂ ನನಗೆ ಹೆಚ್ಚು. ನಿಜವನ್ನರಿಯಲು ನಾನು ಶಕ್ತಿಮೀರಿ ಪ್ರಯತ್ನಿಸುವೆನು. ಮೊದಲು ನಾನೊಂದು ಸಾರಿ ಮಹಾರಾಣಿಯವರ ಶಯ್ಯಾಗಾರವನ್ನು ಪರಿಶೀಲಿಸಿ ಬರಬೇಕಾದುದು ಅಗತ್ಯ" ಎಂದ.

ಅದೇಪ್ರಕಾರ ವೈದ್ಯನನ್ನು ಸಂಗಡ ಕರೆದುಕೊಂಡು ಮಂತ್ರಿ ರಾಣಿಯ ಶಯ್ಯಾಗಾರವನ್ನು ಸೇರಿಕೊಂಡ. ಆಸ್ಥಾನ ವೈದ್ಯನು ಮೇಜಿನ ಮೇಲಿದ್ದ ವಸ್ತುಗಳನ್ನೆಲ್ಲಾ ಒಂದು ಸಾರಿ ನೋಡಿದ. ಟೀಪಾಯಿಯಮೇಲಿದ್ದ ಹಾಲಿನ ಲೋಟ ಉರುಳಿ, ಹಾಲು ಚೆಲ್ಲಿಹೋಗಿತ್ತು.

ಅದರ ಹೊರತು ಮತ್ತೆ ಯಾವ ಸುಳಿವೂ ಸಿಕ್ಕಲಿಲ್ಲ. ನಿರಾಶೆಗೊಂಡು ಹೊರಗೆ ಬರುತ್ತಿರುವಾಗ, ವೈದ್ಯನ ದೃಷ್ಟಿ ಅಕಸ್ಮಾತ್ತಾಗಿ ಕೊಠಡಿಯ ಒಂದು ಮೂಲೆಯಲ್ಲಿ ಬಿದ್ದಿದ್ದ ಒಂದು ವಸ್ತುವಿನ ಮೇಲೆ ಬಿತ್ತು. ಹತ್ತಿರ ನೋಡಲು ಅದೊಂದು ಸತ್ತು ಬಿದ್ದಿದ್ದ ಬೆಕ್ಕು.



ಈ ದೃಶ್ಯ ಕಣ್ಣಿಗೆ ಬಿದ್ದಕೂಡಲೇ ಮಂತ್ರಿ ಮತ್ತು ವೈದ್ಯ ಮುಖಮುಖ ನೋಡಿಕೊಂಡರು. ಆಗ ವೈದ್ಯನು ಚೆಲ್ಲಿಹೋಗಿದ್ದ ಹಾಲಿನಕಡೆ ತೋರಿಸುತ್ತಾ 'ಈ ಹಾಲು ವಿಷ ಪೂರಿತವಾದುದಾಗಿರಬೇಕು. ನಾನು ಕೊಟ್ಟ ಔಷಧವನ್ನು ಈ ಹಾಲಿನಲ್ಲಿ ಬೆರೆಸಿ ಕುಡಿದಿರಬೇಕು ರಾಣಿ. ಆದರೇ ಈ ಹಾಲಿನಲ್ಲಿ ವಿಷ ಹೇಗೆ ಸೇರಿತು? ಅದನ್ನು ನಿಧಾನವಾಗಿ ಪರಿಶೋಧಿಸಬೇಕು' ಎಂದ.

'ಪರಿಶೋಧಿಸಿದರೆ ಎಲ್ಲಾ ಹೊರಗೆ ಬೀಳುತ್ತದೆ ಬಿಡಿ. ಆದರೆ ಮಗುವಿಗೆ ಕೊಡುವ ಈ ಹಾಲಿನಲ್ಲಿ ವಿಷ ಬೆರೆಸಿರಬೇಕಾದರೆ, ದಾದಿಗೆ ಅದರ ವಿಷಯ ತಿಳಿದಿರಲೇಬೇಕು. ಆದ್ದರಿಂದ ಈಗಲೇ ಹೋಗಿ ಅವಳನ್ನು ವಿಚಾರಣೆ ಮಾಡುವ' ಎಂದು ವೈದ್ಯನೊಂದಿಗೆ ಮಂತ್ರಿ ದರ್ಬಾರನ್ನು ಸೇರಿಕೊಂಡ. ದಾದಿಯನ್ನು ಕೂಗಿ ವಿಚಾರಣೆ ಮಾಡಿದ.

ದಾದಿ ಅಂದಳು "ಆ ಬಟ್ಟಲಿನಲ್ಲಿದ್ದುದು ಮಗುವಿಗಾಗಿ ತಂದ ಹಾಲು. ನಾನೆ ಅಲ್ಲಿ ಇಟ್ಟೆ. ಹಾಲು ಕುಡಿಸೋಣವೆನ್ನುವಷ್ಟರಲ್ಲಿ, ಒಬ್ಬ ವೃದ್ಧಳು ಬಂದಳು. ನನ್ನನ್ನು ಬೆದರಿಸಲು ನಾನು ಹೆದರಿಬಿಟ್ಟೆ. ಈ ವಿಷಯ ಹೇಳಲು ಪ್ರಭುಗಳ ಹತ್ತಿರಕ್ಕೆ ಓಡಿಬಂದೆ. ಅಷ್ಟರಲ್ಲಿ ಗಂಟೆಗಳ ಶಬ್ದ ಕೇಳಿಸಿತು. ಗಂಟೆಗಳು ಬಾರಿಸಿದ್ದೂ ಆ ವೃದ್ಧಳೇ ಎಂದು ಕಾವಲುಗಾರನು ಹೇಳಿದನಷ್ಟೇ. ಆ ದುರ್ಮಾರ್ಗಳೇ ಹಾಲಿನಲ್ಲಿ ವಿಷ ಬೆರೆಸಿರಬೇಕು. ಸಧ್ಯ, ಇನ್ನು ಸ್ವಲ್ಪ ಹೊತ್ತಿದ್ದರೆ ಆ ಹಾಲನ್ನು ಮಗುವಿಗೆ ಉಣಿಸುತ್ತಿದ್ದೆ. ಮಗುವಿನ ಪ್ರಾಣಕ್ಕೆ ಹಾನಿ ಬರುತಿತ್ತು. ಈಮಗು ತುಂಬಾ ಅದೃಷ್ಟವಂತ. ಅದರಿಂದಲೇ ದೇವರು ಕಾಪಾಡಿದ.

ಯಾರು ಈ ವೃದ್ಧಳು? ಆಕೆಯದು ಯಾವ ಊರು? ಯಾವ ದೇಶ? ಆಕೆಗೆ ಇಲ್ಲೇನು ಕೆಲಸ?. ಈ ಅಂತಃಪುರದೊಳಗೆ ಹೇಗೆ ಪ್ರವೇಶಿಸಿದಳು? ಯಾರೂ ಇಲ್ಲದ ಸಮಯ ನೋಡಿ ಮರಣದ ಗಂಟೆಗಳನ್ನು





ಮತ್ತು ವೈದ್ಯರನ್ನು ಬಂಧಿಸಿಡುವಂತೆ ಹೇಳಿದ.

* * *

ದಿನಗಳು, ತಿಂಗಳುಗಳು ಕಳೆದು ಹೋಗುತ್ತಿದ್ದವು. ರಾಜಭಟರೆಲ್ಲರೂ ತುಂಬಾ ಜಾಗರೂಕತೆಯಿಂದ ಕಾದುಕೊಂಡಿದ್ದಾರೆ ಅರಮನೆಯನ್ನು. ಆ ವೃದ್ಧಳು ಕಾಣಿಸಿದ ಕೂಡಲೇ ಅವಳನ್ನು ಸೀಳಿಬಿಡೋಣವೆಂದು ತವಕದಿಂದಿದ್ದಾರೆ. ಆದರೆ ಎಷ್ಟುದಿನವಾದರೂ ಅವಳ ಸುಳಿವೇ ಇಲ್ಲ. ಎಲ್ಲರೂ ನಿರಾಶೆಗೊಂಡರು. ಇನ್ನು ರಾಜನ ವಿಷಯ ಹೇಳಲೇ ಬೇಕಾಗಿಲ್ಲ. ರಾಣಿ ಮರಣಿಸಿದ ಸುದ್ದಿ ತಿಳಿದಕೂಡಲೇ ಆತನ ಮನಸ್ಸಿಗೆ ಶಾಂತಿಯಿಲ್ಲವಾಯಿತು. ಮಂತ್ರಿ ಮತ್ತು ಭಾವಮೈದುನನು ಎಷ್ಟೇ ಧೈರ್ಯ ಹೇಳಿದರೂ ಫಲ ಕಾಣಿಸದಾಯಿತು. ಕ್ರಮೇಣ ಆತನ ಆರೋಗ್ಯ ಕೆಟ್ಟುಹೋಯಿತು.

ರಾಜನು ಒಂದುದಿನ ಭಾವಮೈದುನನನ್ನು ಕೂಗಿ, ಮಕ್ಕಳು ಮರಿಗಳೊಂದಿಗೆ ಅರಮನೆಯಲ್ಲೇ ಬಂದು ವಾಸಿಸುವಂತೆ ಹೇಳಿದ.

ಶಕ್ತಿಸಿಂಹನಿಗೆ ಅದಕ್ಕಿಂತಲೂ ಬೇರೇನು ಬೇಕಾಗಿದೆ? ಮರುದಿನವೇ ಕುಟುಂಬಸಮೇತನಾಗಿ ಅರಮನೆಯನ್ನು ಪ್ರವೇಶಿಸಿದ. ಅವನೇ ರಾಜ್ಯಭಾರವನ್ನೂ ವಹಿಸಿದ. ಇನ್ನು ಯುವರಾಜನ ವಿಷಯ—ನಾಮಕರಣದ ದಿನ ದಾದಿಯ ಕೈಯಿಂದ ಜಾರಿಬಿದ್ದ ಕ್ಷಣದಿಂದ ಆ ಮಗುವಿನ ಆರೋಗ್ಯ ಶಿಥಿಲವಾಯಿತು. ರಾಜಕಳೆಯಿಂದ ತುಂಬಿ ತುಳುಕಾಡುತ್ತಿದ್ದ ಆ

ಬಾರಿಸುವುದೆಂದರೇನು? ಇಷ್ಟೆಲ್ಲಾ ಅವಾಂತರ ಮಾಡಿ ಕೈಗೆ ಸಿಕ್ಕದೆ ಅದೃಶ್ಯವಾಗುವುದೆಂದರೇನು? ಈ ಪ್ರಶ್ನೆಗಳಿಗೆಉತ್ತರ ತಿಳಿಯಲಾರದೆ ಮಂತ್ರಿ ಮತ್ತು ಆಸ್ಥಾನ ವೈದ್ಯ ಆಲೋಚನೆಯಲ್ಲಿ ಮುಳುಗಿದರು. ಮಿಕ್ಕವರೆಲ್ಲಾ ಬೆಪ್ಪರಂತೆ ಕುಳಿತಿದ್ದರು. ಆಗ ಮಂತ್ರಿ ಭಟರೊಂದಿಗೆ 'ಈ ವೃದ್ಧಳು ಮಾನವಾತೀತಳಾಗಿರುವಂತೆ ತೋರುವುದು. ಆಕೆಗೆ ಈ ಅರಮನೆಯೊಂದಿಗೆ ಏನೋ ಸಂಬಂಧವಿರಬೇಕು. ನಿಜಾ ನಿಜಗಳು ತಿಳಿಯುವವರೆವಿಗೂ ಏನು ಹೇಳಲೂ ಸಾಧ್ಯವಿಲ್ಲ. ಆಕೆ ಮತ್ತೆ ಇಲ್ಲಿ ಕಾಣಿಸಿಕೊಳ್ಳದೆ ಇರಲಾರಳು. ಬಂದೇ ಬರುತ್ತಾಳೆ. ಜಾಗರೂಕತೆಯಿಂದ ನೀವು ಕಾವಲು ಕಾಯುತ್ತಿರಿ? ಎಂದು ಎಚ್ಚರಿಸಿದ. ಆ ವೃದ್ಧಳು ಕೈಗೆಸಿಗುವವರೆವಿಗೂ ಈ ದಾದಿ





ಮಗುವಿನ ವದನದಿಂದ ಕಿರುನಗೆ ಮಾಯವಾಯಿತು. ಅದಕ್ಕಿಂತಲೂ ವಿಷಾದಕರವಾದ ವಿಷಯವೆಂದರೆ, ದಿನಕಳೆದಂತೆ ಮಗುವಿನ ಎಲ್ಲ ಅಂಗಗಳು ಯಥಾಪ್ರಕಾರವಾಗಿ ಪುಷ್ಟವಾಗಿ ಬೆಳೆಯುತ್ತಿದ್ದರೂ, ಕಾಲುಗಳುಮಾತ್ರ ಸಣ್ಣಗೆ ಕಡ್ಡಿಯಂತೆ ಇದ್ದವು. ಆ ಕಾಲುಗಳಲ್ಲಿ ಕೊಂಚವಾದರೂ ಶಕ್ತಿಯಿರಲಿಲ್ಲ. ಕಾಲಿದ್ದೂ ಕುಂಟನಾಗಿದ್ದ ಆ ಮಗು. ಆದರೆ ಈ ವಿಷಯ ರಾಜನಿಗೆ ತಿಳಿಯದು. ರಾಜನಷ್ಟೇ ಅಲ್ಲ, ಯುವರಾಜನನ್ನ ಈಗ ನೋಡಿಕೊಳ್ಳುತ್ತಿದ್ದ ದಾದಿಗೆ ಹೊರತು ಬೇರೊಂದು ವ್ಯಕ್ತಿಗೆ ಈ ಗುಟ್ಟು ತಿಳಿಯದಂತೆ ಶಕ್ತಿಸಿಂಹ ಕಟ್ಟುಪಾಟು ಮಾಡಿದ. ತುಂಬಾಎಚ್ಚರಿಕೆಯಿಂದ ನಡೆಯಬೇಕೆಂತಲೂ, ದಿನಕ್ಕೆರಡುಬಾರಿ ಮಗುವನ್ನು ಮೆತ್ತನೆಯ ಬಟ್ಟೆಗಳಲ್ಲಿ ಸುತ್ತಿ ರಾಜನಿಗೆ ತೋರಿಸಬೇಕೆಂತಲೂ ದಾದಿಗೆ ಆಜ್ಞಾಪಿಸಿದ.

ಮಗುವನ್ನು ನೋಡಿದಾಗಲೆಲ್ಲಾ 'ನಮ್ಮ ಚಿನ್ನಾರಿಯ ನಗು ಸಹ ನನ್ನ ರಾಣಿಯೊಂದಿಗೆ ಮಾಯವಾಯಿತು. ಪಾಪ! ಎಳೆಗೂಸು. ಹೇಗೆ ಕಾಪಾಡುವಿರೋ ಏನೋ' ಎಂದು ನಿಟ್ಟುಸಿರು ಬಿಡುವನು ರಾಜ. ಯುವರಾಜನ ಮುಖ ಕಳಾಹೀನವಾಗಿರಲು ಕಾರಣ ತುಸಮಟ್ಟಿಗೆ ತಾಯಿಯಿಲ್ಲದ ಲೋಪವೇ ಆಗಿರಬಹುದಾದರೂ, ಬಹುಮಟ್ಟಿಗೆ ಆರೋಗ್ಯ ಕೆಟ್ಟು ಹೋದುದರಿಂದಲೇ ಎಂದು ರಾಜನಿಗೆ ಹೇಗೆ ತಿಳಿಯಬೇಕು.

ಮೂರು ವರ್ಷಗಳು ಕಳೆದವು. ದೇವಸಿಂಹ ಈ ವೇಳೆಗೆ ನಡೆಯುವದನ್ನು ಕಲಿತಿರಬೇಕಷ್ಟೆ. ಆದರೂ ದಾದಿ ಹಿಂದಿನಂತೆಯೇ ಇನ್ನೂ ಮಗುವನ್ನು ಬಟ್ಟೆಗಳಲ್ಲಿಟ್ಟು ಮುಚ್ಚಿ ತಂದು ತೋರಿಸುತ್ತಿದ್ದಳು ರಾಜನಿಗೆ. ಇದನ್ನು ನೋಡಿ ರಾಜ ಒಂದುದಿನ 'ಜಾಗರೂಕತೆಯಿಂದ ನೋಡಿಕೊಳ್ಳಿ ಎಂದು ಹೇಳಿದರೆ ಸದಾ ಮಗು ಕಂಕುಳಲ್ಲೇ ಇಟ್ಟುಕೊಂಡಿರಿ ಅಂತ ತಿಳಿಯುವುದೇ! ನಡೆಯಬೇಕಾದ ವಯಸ್ಸಿನಲ್ಲಿ ನಡೆಯಲು ಬಿಡಬೇಕು. ಎಲ್ಲಿ, ಒಂದುಸಾರಿ ಕೆಳಗಿಳಿಸು, ನನ್ನಮಗು ತಪ್ಪು ಹೆಜ್ಜೆ ಹಾಕುವುದನ್ನು ಕಣ್ಣಾರೆ ನೋಡುತ್ತೇನೆ' ಎಂದ.

ಏನು ಹೇಳಲೂ ದಿಕ್ಕುತೊರದೇ ದಾದಿ ಅತ್ತಿತ್ತ ನೋಡಲು ಪ್ರಾರಂಭಿಸಿದಳು. ಸರಿ

ಯಾಗಿ ಅದೇ ಸಮಯಕ್ಕೆ ಶಕ್ತಿಸಿಂಹ ಅಲ್ಲಿದ್ದ. ದಾದಿ ಪಡುತ್ತಿದ್ದ ಅವಸ್ಥೆಯನ್ನು ಗ್ರಹಿಸಿದ. ಆಕೆ ಉತ್ತರ ಹೇಳುವನುನ್ನ ತಾನೇ ನಡುವೆ ಬಾಯಿ ಹಾಕಿ "ಕ್ಷಮಿಸಬೇಕು. ತಮ್ಮೊಂದಿಗೆ ಒಂದು ವಿಚಾರ ಹೇಳಬೇಕೆಂದು ಬಹಳದಿನ ಗಳಿಂದ ಯೋಚನೆಮಾಡುತ್ತಿದ್ದೆ. ಆದರೇ ಅದೇನಷ್ಟು ದೊಡ್ಡವಿಷಯವಲ್ಲವೆಂದು ನಿಮಗೆ ಹೇಳಲಿಲ್ಲ. ಅನ್ಯಥಾ ಭಾವಿಸಬಾರದು' ಎಂದ.

'ಹೇಳಪ್ಪಾ—ನನ್ನ ಹತ್ತಿರ ಏಕೆ ಸಂದೇಹ' ಎಂದ ರಾಜ.

'ಮತ್ತೇನೂ ಇಲ್ಲ. ನಮ್ಮ ಯುವರಾಜನ ವಿಷಯ. ಹುಟ್ಟಿದಾಗಲಿಂದ ನೋಡುತ್ತಿದ್ದೇನೆ. ಮಗುವಿನ ಕಾಲುಗಳಲ್ಲಿ ಶಕ್ತಿಯಿರುವಂತೆ ಕಾಣಿಸಲಿಲ್ಲ, ಮಿಕ್ಕ ಅವಯವಗಳೆಲ್ಲಾ ಸೊಂಪಾಗಿ ಬೆಳೆಯುತ್ತಿದ್ದರೂ ಕಾಲುಗಳು ಮಾತ್ರ ಕೃಶವಾಗಿವೆ. ಇದಕ್ಕೆ ಕಾರಣವೇನಿರ ಬಹುದೆಂದು ತಿಳಿಯಲು ತಂಬಾ ಯತ್ನಿಸಿದೆ. ಆದರೆ ಏನೂ ಫಲವಾಗಲಿಲ್ಲ. ಬಹುಶಃ ಅದರಿಂದಲೇ ಮಗುವನ್ನು ಕೆಳಗೆ ಇಳಿಸುವುದಿಲ್ಲ' ಎಂದು ಹೇಳಿದ.

ರಾಜ ದಿಙ್ಮೂಢನಾದ. ಆತನಿಗೆ ಕೋಪವೂ ಬಂತು. ಇಷ್ಟುದಿನ ಈ ವಿಷಯ ನನಗೆ ತಿಳಿಸದಿರಲು ಕಾರಣವೇನು? ಎಲ್ಲಿ, ಮಗುವನ್ನಿತ್ತು ಕೊಡು' ಎಂದು ದಾದಿಯ ಕೈಯಿಂದ ತೆಗೆದುಕೊಂಡು, ಕಾಲುಗಳಮೇಲಿದ್ದ ಹೊದಿಕೆಯನ್ನು ತೆಗೆದು ಆ ಮಗುವಿನ ಕಾಲುಗಳನ್ನು ನೋಡಿದ. ಕೃಶಗೊಂಡು, ಮೂಳೆಯಾದರೂ ಇದೆಯೋ ಇಲ್ಲವೋ ಎನ್ನುವ ಸ್ಥಿತಿಯಲ್ಲಿದ್ದ ಆ ಮಗುವಿನ ಕಾಲುಗಳನ್ನು ಕಂಡು ಭೀತಿಗೊಂಡ. ತುಸ ಸಮಯವಾದ ತರುವಾಯ 'ಅಬ್ಬಾ, ಭೀಕರ ದೃಶ್ಯವಿದು. ಕೂಡಲೇ ವೈದ್ಯರನ್ನು ಕರೆಸಿ. ಹೋಗಿ' ಎಂದು ಅರಚಿದ.

ರಾಜ್ಯದಲ್ಲಿದ್ದ ಮಹಾ ಮಹಾ ವೈದ್ಯರೂ, ಪಂಡಿತರೂ ಬಂದು ಚಿಕಿತ್ಸೆನಡೆಸಿದರು. ಆದರೆ ಏನೂ ಪ್ರಯೋಜನವಾಗಲಿಲ್ಲ.

ರಾಣಿಯ ವಿಯೋಗದಿಂದ ಕೊರಗಿ ಕೊರಗಿ ಕೃಶನಾಗಿದ್ದ ರಾಜ ಈ ದುರ್ಭರಸಂಕಟದಿಂದ ಈಗ ಹಾಸಿಗೆ ಹಿಡಿದ.

'ಇನ್ನೇನು ನನ್ನಕಾಲ ಮುಗಿಯಿತು. ನಾನು ತೀರಿಕೊಂಡಮೇಲೆ ನನ್ನ ಮಗುವಿನ ಗತಿ ಏನು? ಎಂದು ಚಿಂತಿಸಿದ ರಾಜ. (ಇನ್ನೂ ಇದೆ)






# ಬಾಲಕನ ಉಪಾಯ

ಒಂದೂರಿನಲ್ಲಿ ಒಬ್ಬ ಬಡವಳಿದ್ದಳು. ಅವಳಿಗೆ ಮೂರುಜನ ಮಕ್ಕಳು. ಅವರು ತೀರಾ ಚಿಕ್ಕವರಾಗಿರುವಾಗಲೇ ಗಂಡನು ತೀರಿಹೋದುದರಿಂದ ಆಕೆ ಕೂಲಿನಾಲಿ ಮಾಡಿ ಮಕ್ಕಳನ್ನು ಸಲಹಬೇಕಾಗಿಬಂತು.

ಎರಡು ವರ್ಷ ಕಷ್ಟಪಟ್ಟು, ಶಕ್ತಿಮೀರಿ ದುಡಿದಪ್ರಯುಕ್ತ ಆಕೆ ಆರೋಗ್ಯಕೆಟ್ಟಿತು. ಔಷಧಿ ತೆಗೆದುಕೊಳ್ಳಲು ಹಣವಾದರೂ ಎಲ್ಲಿದೆ? ಹಾಗೇ ಅಶ್ರದ್ಧೆ ಮಾಡಿದುದರಿಂದ ಕ್ರಮೇಣ ಆಕೆ ಹಾಸಿಗೆ ಹಿಡಿಯುವ ದುಸ್ಥಿತಿ ಬಂದೊದಗಿತು.

ಆಗ ಮಕ್ಕಳು ಮೂವರೂ ಒಂದುಕಡೆ ಕುಳಿತು ಈ ರೀತಿ ಆಲೋಚಿಸಿದರು.

"ಹೇಗಾದರೂ ಮಾಡಿ ನಾವು ಹಣ ಸಂಪಾದಿಸಿ, ಆ ಹಣದಿಂದ ಅಮ್ಮನನ್ನು ಕರೆದುಕೊಂಡು ಹೋಗಿ ಡಾಕ್ಟರಿಗೆ ತೋರಿಸಬೇಕು. ಔಷಧಿಕೊಡಿಸಬೇಕು" ಎಂದ ಎಲ್ಲರಿಗಿಂತಲೂ ಹಿರಿಯುವನಾದ ರಾಮಯ್ಯ

'ಅಮ್ಮ ಹುಷಾರಾದಮೇಲೆ ಆಕೆಗೆ ಶ್ರಮ ಕೊಡದೆ ನಾವೇ ಹಣ ಸಂಪಾದಿಸಿ ಹೊಟ್ಟೆ ಬಟ್ಟೆಗೆ ನೋಡಿಕೊಳ್ಳಬೇಕು" ಎಂದ ಎರಡನೇಯವ ರಂಗಯ್ಯ. "ಎಲ್ಲ ಸರಿ, ಆದರೆ ಹಣ ಸಂಪಾದಿಸುವುದು ಹೇಗೆ?" ಎಂದು ಪ್ರಶ್ನೆಹಾಕಿದ ಕೊನೆಯುವ ರಾಜಣ್ಣ.

'ಹೇಗೆ ಮತ್ತೆ' ಎಂದು ಅಣ್ಣಂದಿರಿಬ್ಬರೂ ಯೋಚಿಸಿದರು.

"ನಾನು ಯಾವುದಾದರೂ ಆಫೀಸಿನಲ್ಲಿ ಕೆಲಸಕ್ಕೆ ಸೇರುತ್ತೇನೆ. ಒಳ್ಳೆಸಂಬಳ ಕೊಡುವರಂತೆ ಆಫೀಸುಗಳಲ್ಲಿ" ಎಂದ ರಾಮು.

"ಹಾಗಾದರೆ ನಾನೂ ಅದೇ ಕೆಲಸಮಾಡುತ್ತೇನೆ. ನಮ್ಮಿಬ್ಬರ ಸಂಬಳ ಸೇರಿಸಿದರೆ ಬೇಕಾದಷ್ಟಾಯಿತು" ಎಂದ ರಂಗ.

"ಆಫೀಸಿನಲ್ಲಿ ಕೆಲಸ ಮಾಡಬೇಕೆಂದರೆ ಮೊದಲು ಸ್ಕೂಲಿಗೆ ಹೋಗಿ ಓದಬೇಕು. ನೀವೇನೂ ಓದಿಕೊಂಡಿಲ್ಲವಲ್ಲ! ಕೆಲಸ ಯಾರು ಕೊಡುತ್ತಾರೆ?' ಎಂದ ರಾಜ.

"ಹಾಗಾದರೆ ವ್ಯಾಪಾರ ಮಾಡೋಣ. ಹಲಸಿನ ಹಣ್ಣು, ಕಿತ್ತಲೆ ಹಣ್ಣು, ಕಡಲೆಪುರಿ, ಕಡಲೇಕಾಯಿಬೀಜ ಮುಂತಾದುವೆಲ್ಲಾ ತಂದು, ಬೀದಿಯುದ್ದಕ್ಕೂ ಕೂಗುತ್ತಾ

ಪಿ. ವಿ. ರಾಮಚಂದ್ರಮೂರ್ತಿ, ಮದರಾಸು



ಹೋದರೆ, ಮಕ್ಕಳೆಲ್ಲಾ ಕೊಂಡುಕೊಳ್ಳುವರು" ಎಂದು ತನಗೆ ತೋರಿದ ಉಪಾಯ ಹೇಳಿದ ಹಿರಿಯವ.

"ಹೌದು. ಇಬ್ಬರೂ ತಲಾ ಒಂದೊಂದು ಬೀದಿಗೆ ಹೋಗಿ ಮಾರಿಕೊಂಡು ಬರಬಹುದು ಈ ಆಲೋಚನೆ ತುಂಬಾ ಸೊಗುಸಾಗಿದೆ" ಎಂದ ಎರಡನೆಯವ. ಆದರೆ ಕಿರಿಯವನು ಅದಕ್ಕೆ ಒಪ್ಪಲಿಲ್ಲ.

"ವ್ಯಾಪಾರ ಮಾಡಲು ಮೊದಲು ಹಣ ಬೇಕು. ಪುರಿಗಡಲೆ, ಮುಂತಾದುವನ್ನೆಲ್ಲಾ ಕೊಂಡು ತರಲು ಹಣವಿರಬೇಕು. ಹಣ ಎಲ್ಲಿದೆ? ಅದಷ್ಟೇ ಅಲ್ಲ, ಹಣ್ಣು, ಪುರಿ ಮುಂತಾದುವನ್ನು ಕಂಡರೆ ನಮಗೆ ತುಂಬಾ ಇಷ್ಟ. ಮಾರುತ್ತಿರುವಾಗ ಅವನ್ನು ತಿನ್ನಲು ನಮಗೇ ಬುದ್ಧಿ ಹೋಗಬಹುದು. ಆದುದರಿಂದ ನೀವುಹೇಳಿದ ಉಪಾಯ ಸರಿಕಾಣುವುದಿಲ್ಲ" ಎಂದ ರಾಜ.

ಈ ರೀತಿಯಾಗಿ ಎಷ್ಟೋ ಉಪಾಯಗಳನ್ನು ರಾಮಯ್ಯ ಯೋಚಿಸಿ ಹೇಳುವನು. ರಂಗಯ್ಯ ಅಂಗೀಕರಿಸುವನು. ಆದರೆ ಕಿರಿಯ ರಾಜ ಅವುಗಳೆಲ್ಲಾ ಅಪ್ರಯೋಜಕ ಯೋಚನೆಗಳೆಂದು ಖಂಡಿಸುವನು. ಇದೇರೀತಿ ಅದೆಷ್ಟೋ ಬಾರಿ ನಡೆಯಿತು.

ಕೊನೆಗೆ ಅಣ್ಣಂದಿರಿಬ್ಬರಿಗೂ ಕೋಪ ಬಂತು. "ಯಾವುದು ಹೇಳಿದರೂ ಕೆಲಸಕ್ಕೆ ಬಾರದೆಂದು ಹೇಳುತ್ತೀಯೆ. ನಾವು ಹೇಳಿದ ಹಂಚಿಕೆಗಳನ್ನು ಹಾಳು ಮಾಡುವುದೇ ಹೊರತು, ನಿನ್ನ ಹಾಳಾದ ತಲೆಯಲ್ಲಿ ಒಂದಾದರೂ ಯೋಚನೆ ಓಡುವುದಿಲ್ಲ" ಎಂದು ಗದರಿಸಿಕೊಂಡರು.

ಆಗ ಕಿರಿಯವನೆಂದ "ನನಗೊಂದು ಉಪಾಯ ಹೊಳೆದಿದೆ. ಈ ಊರಿನಲ್ಲಿ ಕಳ್ಳತನ ಬಹಳ ಹೆಚ್ಚಿರುವುದರಿಂದ ಕಳ್ಳರನ್ನು ಹಿಡಿದುಕೊಟ್ಟರೆ ಬಹುಮಾನ ಕೊಡುವುದಾಗಿ ಮಹಾರಾಜರು ಡಂಗುರ ಹೊಡೆಸಿದ್ದಾರಷ್ಟೆ?" ಎಂದ.

"ಊಂ. ಕೇಳಿದ್ದೇವೆ. ಆದರೆ ಅದರಿಂದ ನಮಗೆ ಬಂದ ಲಾಭವೇನು? ನಾವೋ ಸಣ್ಣ ಹುಡುಗರು. ಕಳ್ಳರನ್ನು ಭಾರಿಭಾರಿ ಪೋಲೀಸರೇ ಹಿಡಿಯಲಾರರು. ಇನ್ನು ನಾವು ಹಿಡಿಯುತ್ತೇವೆಯೇ?" ಎಂದರು ಅಣ್ಣಂದಿರು.





"ನಿಜವಾದ ಕಳ್ಳನನ್ನು ಹಿಡಿಯಬೇಕಾಗಿಲ್ಲ. ನಾವು ಮೂರು ಜನರಿದ್ದೇವೆ. ನಮ್ಮಲ್ಲಿ ಒಬ್ಬ ಕಳ್ಳನಾಗಬೇಕು. ಮಿಕ್ಕ ಇಬ್ಬರು ಅವನನ್ನು ರಾಜನಿಗೆ ಹಿಡಿದುಕೊಟ್ಟು ಬಹುಮಾನ ಪಡೆಯಬೇಕು" ಎಂದ ಕಿರಿಯವ.

ಆ ಇಬ್ಬರು ಅಣ್ಣಂದಿರಿಗೂ ಈ ಹಂಚಿಕೆ ಒಪ್ಪಿತು. "ನಾನು ಕಳ್ಳನಾಗುತ್ತೇನೆ," "ನಾನು ಕಳ್ಳನಾಗುತ್ತೇನೆ" ಎಂದು ಮುಂದೆ ಬಂದರು.

ಅದಕ್ಕೆ ಕಿರಿಯವನಾದ ರಾಜ ಅಂದ. "ಕಳ್ಳ ಎಷ್ಟು ಚಿಕ್ಕವನಾಗಿದ್ದರೆ ಅಷ್ಟು ಉತ್ತಮ. ಆದುದರಿಂದ ನಾನು ಕಳ್ಳನಾಗುವೆ. ನೀವಿಬ್ಬರೂ ನನ್ನನ್ನು ಬಂಧಿಸಿ ಮಹಾರಾಜನ ಹತ್ತಿರ ಕರೆದುಕೊಂಡು ಹೋಗಿ"

ರಾಮಯ್ಯ ರಂಗಯ್ಯ ಸರಿ ಎಂದರು. ಆದರೆ ಅವರಿಗೆ ಒಂದು ವಿಷಯದಲ್ಲಿ ಭಯವಾಯಿತು. 'ನಾವೇನೋ ನಮ್ಮ ತಮ್ಮನನ್ನು ಕಳ್ಳನೆಂದು ಮಹಾರಾಜರಿಗೆ ಒಪ್ಪಿಸಿದರೆ ಬಹುಮಾನ ಬರಬಹುದು. ಆದರೆ ಅವನನ್ನು ಸೆರೆಮನೆಗೆ ಕಳುಹಿಸಿದರೆ ಹೇಗೆ?' ಆದುದರಿಂದ ಈ ಉಪಾಯಕ್ಕೆ ಒಡಂಬಡಲು ಅವರಿಗೆ ಇಷ್ಟವಿಲ್ಲದಾಯಿತು.

ಆಗ ಕಿರಿಯವನು ಧೈರ್ಯದಿಂದ ಮುಂದೆ ಬಂದು "ನೀವು ನಾನು ಹೇಳಿದಂತೆ ಮಾಡದಿದ್ದರೆ ಅಮ್ಮ ಉಳಿಯಲಾರಳು. ನಾನು ಜೈಲಿನಲ್ಲಿರಬೇಕಾಗುವುದಲ್ಲಾ ಎಂದು ಅಮ್ಮನನ್ನು ಬಾಧೆಪಡಿಸುವುದು ಸರಿಯೇ?" ಎಂದು ಕೇಳಿದ. ವಿಧಿಯಿಲ್ಲದೆ ಅವರು ಒಪ್ಪಿಕೊಂಡರು

ಅವರು ಒಪ್ಪಿಕೊಂಡಕೂಡಲೇ ಕಿರಿಯವನು ಇನ್ನು ತಡವೇಕೆಂದು, ಕೂಡಲೇ ಹಾಕಿಕೊಂಡಿದ್ದ ಬಟ್ಟೆಗಳನ್ನು ಕಳಚಿ, ಬರಿ ಲಂಗೋಟಿ ಕಟ್ಟಿಕೊಂಡ. ಮೈಗೆ, ಕೈಗೆ ಮಸಿಬಳಿದುಕೊಂಡ. ತಲೆಕೆದರಿಕೊಂಡು 'ಈಗ ನಾನು ಕಳ್ಳನಂತೆ ಕಾಣುತ್ತಿಲ್ಲವೇ?' ಎಂದು ಅಣ್ಣಂದಿರನ್ನು ಕೇಳಿದ.

ಅವರಿಗೆ ಮಾತ್ರ ಕಳ್ಳ ಹೇಗಿರುವನೋ ಹೇಗೆ ಗೊತ್ತಾಗಬೇಕು? ಕಳ್ಳರೆಲ್ಲಾ ಆ ರೀತಿಯಿರಬಹುದೇನೋ ಎಂದುಕೊಂಡು 'ಓ ಹಾಗೇ ಇದ್ದೀಯೆ ಕಣೋ' ಎಂದರು.

ಕಿರಿಯವ ಒಂದು ಹಗ್ಗ ಸಂಪಾದಿಸಿದ. ಕೈಗಳೆರಡನ್ನೂ ಹಿಂದಕ್ಕಿಟ್ಟು, ಹಗ್ಗದಿಂದ

ಕಟ್ಟಿಸಿಕೊಂಡ. ನಿಜವಾಗಿ ಕೈಗೆ ಸಿಕ್ಕಿಬಿದ್ದ ಕಳ್ಳನಂತೆ ತಲೆತಗ್ಗಿಸಿ, ಪೆಚ್ಚುಮುಖ ಹಾಕಿಕೊಂಡು ಹೊರಟ.

ತನ್ನ ಅಣ್ಣಂದಿರೊಂದಿಗೆ ಈರೀತಿ ಎಚ್ಚರಿಕೆ ಕೊಟ್ಟ. "ನೀವು ತುಸ ಗಲಭೆ ಮಾಡುತ್ತಾ ನನ್ನನ್ನು ಎಳೆದುಕೊಂಡು ಹೋಗಬೇಕು. 'ನಡಿ, ನಡಿಯೋ ಕಳ್ಳಾ' ಎಂದು ಆಗಾಗ ಗದರಿಸುತ್ತಿರಬೇಕು. ಸುಮ್ಮನೆ ಬೀದಿಯಲ್ಲಿ ಹೋಗುತ್ತಿದ್ದರೆ ಪ್ರಯೋಜನವಿಲ್ಲ." ಎಂದ.

ತಮ್ಮ ಹೇಳಿದಪ್ರಕಾರ ಅಣ್ಣಂದಿರು ಅವನನ್ನು ರಾಜಬೀದಿಯಲ್ಲಿ ಎಳೆದುಕೊಂಡು ಹೋದರು. 'ಕಳ್ಳನನ್ನು ಹಿಡಿದೆವು. ಕಳ್ಳನನ್ನು ಹಿಡಿದೆವು. ಎಂದು ಕೂಗಾಡಲು ಬೀದಿಯ ಜನರೆಲ್ಲಾ ಅವರನ್ನು ಹಿಂಬಾಲಿಸಿದರು. ಕ್ರಮೇಣ ಅದೊಂದು ದೊಡ್ಡ ಗುಂಪಾಯಿತು.

ಅರಮನೆಯ ಕಾವಲುಗಾರರು ಅವರನ್ನು ಒಳಗೆ ಬಿಡುವುದಿಲ್ಲವೆಂದು ಹೇಳಿದರು.

ಆದರೆ ಗಲಾಟೆಕೇಳಿ ಮಹಾರಾಜರೇ ಹುಡುಗರನ್ನು ಒಳಕ್ಕೆ ಕರೆಸಿವರು.

ಅವರು ತಮ್ಮ ಎದುರು ಬಂದ ಕೂಡಲೇ 'ಏನ್ರೋಅದು?" ಎಂದು ಮಹಾರಾಜರು ದರ್ಪದಿಂದ ಕೇಳಲು ಅಣ್ಣಂದಿರಿಬ್ಬರೂ ತಬ್ಬಿಬ್ಬಾದರು. ಬಾಯಿಂದ ಮಾತೇ ಹೊರಡದಾಯಿತು. ಸುಮ್ಮನಿದ್ದರೆ ಕಾರ್ಯ ಕೆಡುವುದೆಂದರಿತು ಕಿರಿಯವನಾದ ರಾಜ "ಮಹಾಪ್ರಭೂ, ನಾನು ಕಳ್ಳ. ಇವರು ನನ್ನನ್ನು ಹಿಡಿದಿದ್ದಾರೆ. ಅವರಿಗೆ ಬಹುಮಾನ ಕೊಟ್ಟು, ನನ್ನನ್ನು ಸೆರೆಮನೆಗೆ ಕಳುಹಿಸಿ" ಎಂದ.

ಬಹುಮಾನದ ಆಸೆಗಾಗಿ ಇವರು ಈ ಯುಕ್ತಿ ಮಾಡಿದರೆಂದು ಮಹಾರಾಜರು ತಿಳಿದುಕೊಂಡರು. 'ನಿಜಹೇಳ್ರೋ' ಎಂದು ಗದರಿಸಲು, ಆ ಹುಡುಗರು ನಿಜನುಡಿದುಬಿಟ್ಟರು. ರಾಜರು ಆ ಹುಡುಗರ ಮಾತೃಭಕ್ತಿಗೂ, ಕಿರಿಯವನ ಬುದ್ಧಿವಂತಿಕೆಗೂ ತಲೆದೂಗಿದರು. ಆ ಹುಡುಗರ ತಾಯಿಯ ಆರೋಗ್ಯವನ್ನು ನೋಡಿಕೊಳ್ಳಲು ಆಸ್ಥಾನ ವೈದ್ಯನನ್ನು ತಕ್ಷಣ ಕಳುಹಿಸಿದರು. ಕೆಲವು ದಿನಗಳಲ್ಲೇ ಆಕೆ ಗುಣಹೊಂದಿದಳು.

ಆ ಮೂವರನ್ನು ಸಲಹಿ ದೊಡ್ಡವರನ್ನಾಗಿ ಮಾಡಿ, ಅವರಿಗೆ ತನ್ನ ಆಸ್ಥಾನದಲ್ಲೆ ನೌಕರಿ ಒದಗಿಸಿಕೊಟ್ಟ ಆ ಮಹಾರಾಜ.






ವಿದರ್ಭಮಹಾರಾಜನಿಗೆ ಜಯಂತನೆಂಬ ಮಗನಿದ್ದ. ಆತನು ಸ್ಫುರದ್ರೂಪಿ. ಸ್ಫುರದ್ರೂಪಿ ಮಾತ್ರವೇ ಅಲ್ಲ; ಶಕ್ತಿವಂತ, ಪರಾಕ್ರಮಿ. ಆತನ ವಿಷಯ ತಿಳಿದ ಪ್ರತಿ ರಾಜಕುಮಾರಿಯೂ ಆತನನ್ನೇ ಮದುವೆಯಾಗಬೇಕೆಂದು ಹಂಬಲಿಸುತ್ತಿದ್ದಳು. ಆದ್ದರಿಂದ ದಿನಾ ಯಾವುದೋ ಒಂದು ಕಡೆಯಿಂದ ಸ್ವಯಂವರಕ್ಕೆ ಬರಬೇಕೆಂದು ಜಯಂತನಿಗೆ ಆಹ್ವಾನ ಪತ್ರಿಕೆಗಳು ಬರುತ್ತಿದ್ದವು. ಅನೇಕ ಜನ ರಾಜರು ತಮ್ಮ ಕುವರಿಯರ ಭಾವಚಿತ್ರಗಳನ್ನು ಜಯಂತನಿಗೆ ಕಳುಹಿಸಿ, ಆತನ ಅಭಿಪ್ರಾಯ ತಿಳಿಸುವಂತೆ ಕೋರುವರು.

ಜಯಂತ ಸ್ವಯಂವರಕ್ಕೇನೋ ಹೋಗುತ್ತಿದ್ದ. ಆದರೆ ಮದುಮಗಳನ್ನು ಕಂಡ ಮೇಲೆ ತನಗೆ ಮೆಚ್ಚಿಕೆಯಾಗದಿದ್ದಲ್ಲಿ, ಆಕೆ ಪೂಮಾಲೆಯೊಂದಿಗೆ ತನ್ನ ಹತ್ತಿರ ಬರುವ ಮೊದಲೇ ಅಲ್ಲಿಂದ ತಪ್ಪಿಸಿಕೊಂಡು ಹೊರ ಬೀಳುತ್ತಿದ್ದ. ತನ್ನ ಹತ್ತಿರಕ್ಕೆ ಬರುತ್ತಿದ್ದ ಭಾವ ಚಿತ್ರಗಳನ್ನು ಆತನು ಉತ್ಸಾಹರಹಿತನಾಗಿ ನೋಡಿ, ತುಟಿಕಚ್ಚಿ, ಒಂದೆಡೆ ಹಾಕುತ್ತಿದ್ದ.

ಮಗನು ಯಾವಹುಡುಗಿಯನ್ನೂ ಮೆಚ್ಚದುದನ್ನು ಕಂಡು ವಿದರ್ಭಮಹಾರಾಜನಿಗೆ ಸಂಕಟವಾಯಿತು. ಒಂದುದಿನ ರಾಣಿ ಜಯಂತನನ್ನು ಅಂತಃಪುರಕ್ಕೆ ಬರಮಾಡಿಕೊಂಡು "ಕುಮಾರಾ, ಜಯಂತಾ, ಯಾರೋ ಒಬ್ಬ ರಾಜಕುಮಾರಿಯನ್ನು ಆರಿಸಿ ಮದುವೆಯಾಗು. ನೀನು ವಿವಾಹವಾಗಿ ಮಕ್ಕಳು ಮರಿಗಳನ್ನು ಪಡೆದರೆ ಮೊಮ್ಮಕ್ಕಳನ್ನು ಕಂಡು ಸಂತೋಷಪಡಲು ಕಾತುರಳಾಗಿದ್ದೇನೆ. ನನ್ನ ಕೋರಿಕೆ ನೆರವೇರಿಸುವುದಿಲ್ಲವೇ? ಎಂದಳು.

ಅದಕ್ಕೆ ಜಯಂತನು "ನಾನೇನು ಮಾಡಲಿ? ಯಾರೂ ನನಗೆ ಸರಿತೋರಲಿಲ್ಲ. ಈ ರಾಜಕುಮಾರಿಯರೆಲ್ಲಾ ನಿಜವಾದವರಲ್ಲವೇನೋ ಎಂಬ ಸಂಶಯ ಬರುತ್ತದೆ' ಎಂದ.

ಆ ಮಾತು ಕೇಳಿ ಮಹಾರಾಣಿ "ನಿಜ ರಾಜಕುಮಾರಿಯರೆಂದರೆ ಹೇಗಿರುವರು ಮಗು? ನಿನ್ನ ಅಭಿಪ್ರಾಯವೇನೋ ನನಗೆ ಬಿಡಿಸಿ ಹೇಳಿದರೆ ಅಂತಹ ಹುಡುಗಿಯನ್ನು ಹುಡಿಕಿ ತರಿಸಿ ಮದುವೆ ಮಾಡುವೆನು' ಎಂದು ಹೇಳಿದಳು.

ಟಿ. ಸಾವಿತ್ರಿ, ಕೋಲಾರ



"ರಾಜಕುಮಾರಿ ಎಂದರೆ ಆಕೆ ಅತಿ ಸುಕು ಮಾರಿಯಾಗಿರುವಳು. ನಾನು ಕಂಡವರೆಲ್ಲಾ ಒರಟರಾಗಿ ಕಾಣುವರೇ ಹೊರತು ನಾಜೂಕಾದವರಲ್ಲ' ಎಂದ ಜಯಂತ.

* * *

ಮಹಾರಾಣಿ ಕಾಶಿಯಾತ್ರೆ ಮಾಡ ಬಯಸಿದಳು. ತಾಯಿಗೆ ಸಹಾಯವಾಗಿರಲು ಜಯಂತನನ್ನು ಸಂಗಡ ಹೋಗುವಂತೆ ಹೇಳಿದರು.

ವಿದರ್ಭದೇಶದ ಮಹಾರಾಣಿ, ಮತ್ತು ಯುವರಾಜನು ತಮ್ಮ ದೇಶಕ್ಕೆ ಬರುವರೆಂದು ತಿಳಿದು ಕಾಶಿದೇಶದ ರಾಣಿ ಅವರಿಗೆ ಸ್ವಾಗತ ಕೋರಿ, ತಮ್ಮ ಅರಮನೆಯಲ್ಲೇ ಅವರು ಬಿಡಾರಮಾಡಲು ಏರ್ಪಾಟು ಮಾಡಿದಳು.

ಕಾಶಿರಾಣಿಗೆ ಅಪೂರ್ವಸುಂದರಿಯಾದ ಓರ್ವ ಮಗಳಿದ್ದಳು. ಆ ಬಾಲೆಯ ಕೆನ್ನೆಗಳು ಗುಲಾಬಿಯ ದಳಗಳಂತೆ ಮೃದುವಾಗಿ, ಮನೋಹರವಾಗಿತ್ತು. ಆಕೆಯ ಕೈಗಳು ಸುಮಕೋಮಲವಾಗಿದ್ದವು. ಆಕೆಯ ನಡೆ, ಮಾನಸ ಸರೋವರದಲ್ಲಿ ರಾಜಹಂಸವು ವಿಹರಿಸುವಂತೆ ಗೋಚರವಾಗುತಿತ್ತು.

ಆ ಬಾಲೆಯನ್ನು ನೋಡಿದಕೂಡಲೇ ವಿದರ್ಭಮಹಾರಾಣಿ ಆಕೆಯನ್ನು ತನ್ನ ಸೊಸೆಯನ್ನಾಗಿ ಮಾಡಿಕೊಳ್ಳುವ ಅಪೇಕ್ಷೆ ಆಯಿತು. ಜಯಂತನನ್ನು ರಹಸ್ಯವಾಗಿ ಕರೆದು ತೋಟದಲ್ಲಿ ಹೂ ಕೀಳುತ್ತಿದ್ದ ರಾಜಕುಮಾರಿಯನ್ನು ತೋರಿಸಿ "ಏನುಹೇಳುವೆ? ಎಂದು ಕೇಳಿದಳು.

ಜಯಂತ ಆ ಹುಡುಗಿಯನ್ನು ನೋಡಿ ಮೆಚ್ಚಿಕೊಂಡ. ಆದರೆ 'ನಿಜವಾದ ರಾಜಕುಮಾರಿಯೋ ಅಲ್ಲವೋ' ಎಂದು ಸಂಶಯವನ್ನು ಸೂಚಿಸಿದ.

"ಅಲ್ಲದೇನು? ಇದರಲ್ಲಿ ಅನುಮಾನವೇನು? ಇಂತಹ ಹುಡುಗಿ ನಾವು ಸಾವಿರವರ್ಷ ತಪಸ್ಸು ಮಾಡಿದರೂ ಲಭಿಸಲಾರಳು. ಇನ್ನು ಸಂಶಯಪಡದೆ ಈ ಹುಡುಗಿಯನ್ನು ಮದುವೆಯಾಗು "ಎಂದು ಮಹಾರಾಣಿ ಮಗನಿಗೆ ಬುದ್ಧಿ ಹೇಳಿದಳು. ಆತನು ಏನೋ ಹೇಳಲು ಪ್ರಯತ್ನಿಸುತ್ತಿದ್ದರೆ, ಅದಕ್ಕೆ ಗಮನಕೊಡದೆ, ಆಕೆ ನೆಟ್ಟಗೆ ಕಾಶಿರಾಣಿಯ ಹತ್ತಿರ ಹೋಗಿ "ಅತ್ತಿಗೆ, ನಿಮ್ಮೊಂದಿಗೆ ಸಂಬಂಧ ಬೆಳೆಸಬೇಕೆಂದು ನನಗೆ ಉತ್ಕಟೇಚ್ಛೆಯಾಗಿದೆ" ಎಂದು ಹೇಳಿದಳು ಮುಚ್ಚು ಮರೆಯಿಲ್ಲದೆ.

ಅದಕ್ಕೆ ಕಾಶಿರಾಣಿ "ತುಂಬಾ ಸಂತೋಷ. ಆದರೆ ನಮ್ಮ ಹುಡುಗಿ ತುಂಬಾ ಸುಕುಮಾರಿ. ಈ ವಿಷಯ ಅರಿತು, ಕಣ್ಣಿನ ರೆಪ್ಪೆಯಂತೆ ಕಾಪಾಡುವ ವರನಿಗೆ ಹೊರತು ಅನ್ಯರಿಗೆ ಕೊಟ್ಟು ಮದುವೆ ಮಾಡಲು ಇಷ್ಟವಿಲ್ಲದೆ, ಪ್ರಾಪ್ತ ವಯಸ್ಸಾಗಿದ್ದರೂ ಸಹ ನಮ್ಮ ಯಜಮಾನರು ಸ್ವಯಂವರ ಏರ್ಪಡಿಸಲಿಲ್ಲ. ಅಂತಹ ವರನಿಗಾಗಿ ಚಾರರ ಮುಖಾಂತರ ಹುಡುಕಿಸುತ್ತಿದ್ದಾರೆ. ಯೋಗ್ಯ ಮದುಮಗನು ಲಭಿಸಿದರೆ ವಿವಾಹಮಾಡುವ ಎಂದಿದ್ದಾರೆ' ಎಂದು ಹೇಳಿದಳು.



ವಿದರ್ಭ ರಾಣಿ ಕೂಡಲೇ ಮಗನೊಂದಿಗೆ "ಮಗೂ ನೀನು ಎಂತಹ ಹೆಂಡತಿ ಬೇಕೆಂದು ಇಷ್ಟು ದಿನಗಳಿಂದ ಕಾದಿದ್ದೆಯೋ ಅಂತಹ ಮದುಮಗಳೇ ಈಗ ಲಭಿಸಿರುವಳಪ್ಪಾ. ಈಕೆ ತುಂಬಾ ಸುಕುಮಾರಿಯಂತೆ" ಎಂದಳು.

ಅದಕ್ಕೆ ಜಯಂತನು "ಮಾತಿಗೇನು ಬಿಡಮ್ಮ—ಎಲ್ಲರೂ ಹಾಗೇ ಹೇಳುವರು. ಆಕೆ ಸುಕುಮಾರಿಯೋ ಅಲ್ಲವೋ ಪರೀಕ್ಷೆ ಮಾಡಿದ ಹೊರತು ಒಂದು ನಿರ್ಧಾರಕ್ಕೆ ಬರುವಂತಿಲ್ಲ' ಎಂದು ಖಂಡತುಂಡಾಗಿ ಹೇಳಿಬಿಟ್ಟ.

'ಸರಿ' ಎಂದು ಹೇಳಿ, ರಾಣಿ ಯಾವರೀತಿ ಈ ಪರೀಕ್ಷೆ ನಡೆಸಲಿ ಎಂದು ಆಲೋಚಿಸುತ್ತಿದ್ದಳು. ಇಷ್ಟರಲ್ಲಿ ಸಾಯಂಕಾಲವಾಯಿತು. ಇಪ್ಪತ್ತು ಜನ ಪರಿಚಾರಿಕೆಯರು ತಲೆಗೊಂದರಂತೆ ಹಾಸಿಗೆಯನ್ನು ಹಿಡಿದುಕೊಂಡು ರಾಜಕುಮಾರಿಯು ಮಲಗುವ ಕೋಣೆಯ ಕಡೆ ಹೋಗುತ್ತಿರುವುದು ಆಕೆಯಕಣ್ಣಿಗೆ ಬಿತ್ತು.

ವಿದರ್ಭದೇಶದ ರಾಣಿ ಅವರನ್ನು ಕುರಿತು 'ಏನಿದು? ಎಲ್ಲರೂ ಒಂದೇಸಾರಿ ಇಷ್ಟೊಂದು ಹಾಸಿಗೆಗಳನ್ನು ಎಲ್ಲಿಗೆ ತೆಗೆದುಕೊಂಡು ಹೋಗುತ್ತಿರುವಿರಿ?' ಎಂದು ಕೇಳಿದಳು.

'ನಮ್ಮ ರಾಜಕುಮಾರಿ ತುಂಬಾ ನಾಜೂಕಾದವಳು. ಇಪ್ಪತ್ತು ಹಾಸಿಗೆಗಳನ್ನು ಒಂದರ ಮೇಲೊಂದು ಹರಡಿ ಆಕೆಯನ್ನು ಮಲಗಿಸುವೆವು. ಇಲ್ಲದಿದ್ದರೆ ಆಕೆಗೆ ನಿದ್ರೆ ಬರುವುದಿಲ್ಲ' ಎಂದು ಹೇಳಿದರು. ವಿದರ್ಭದೇಶದ ರಾಣಿ ಈ ಕೌತುಕವನ್ನು ನೋಡುವ ಸಲುವಾಗಿ ಅವರೊಂದಿಗೆ ರಾಜಕುಮಾರಿಯ ಶಯ್ಯಾಗಾರಕ್ಕೆ ಹೊರಟಳು. ಆ ಹಾಸಿಗೆಗಳನ್ನು ಎತ್ತಿಕೊಂಡು ಹೋಗುತ್ತಿದ್ದ ಪರಿಚಾರಿಕೆಯ

ರಲ್ಲಿ ಒಬ್ಬಳು ಬಟಾಣಿ ತಿನ್ನುತ್ತಾ ನಡೆಯು ತ್ತಿದ್ದಳು. ಬಾಯಿಗೆ ಬಟಾಣಿ ಹಾಕಿಕೊಳ್ಳು ವಾಗ ಒಂದು ಕಾಳು ಕೆಳಗೆ ಬಿತ್ತು.

ಆ ಬಟಾಣಿಯನ್ನು ಕಂಡು ವಿದರ್ಭದೇಶದ ರಾಣಿಗೆ ಮಿಂಚಿನಂತಹ ಒಂದು ಆಲೋಚನೆ ಹೊಳೆಯಿತು. ಯಾರಿಗೂ ಕಾಣದಂತೆ ಆಕೆ ಅದನ್ನು ತೆಗೆದುಕೊಂಡಳು.

ಪರಿಚಾರಿಕೆಯರು ಮಂಚದ ಮೇಲೆ ಒಂದರ ಮೇಲೊಂದು ಇಪ್ಪತ್ತು ಹಾಸಿಗೆ ಗಳನ್ನು ಹಾಸಿ, ಹೊರಟುಹೋದರು. ಈ ಸಮಯ ನೋಡಿ ರಾಣಿ ತಾನು ತಂದ ಬಟಾಣಿಬೀಜವನ್ನು ಕೆಳಗಿನ ಹಾಸಿಗೆಯ ಅಡಿಯಿಟ್ಟು, ಏನೂ ಅರಿಯದವಳಂತೆ ಅಲ್ಲಿಂದ ಹೊರಬಿದ್ದಳು.

ಬೆಳಗಾಯಿತು. ವಿದರ್ಭದೇಶದ ರಾಣಿ ಕಾಶಿದೇಶದ ರಾಜಕುಮಾರಿಯನ್ನು ನೋಡಲು ಹೋದಳು. ರಾಜಕುಮಾರಿ ರಾತ್ರಿಯೆಲ್ಲಾ ನಿದ್ದೆಯಿಲ್ಲದೆ ತುಂಬಾ ಆಯಾಸಗೊಂಡಂತೆ ಕಾಣಿಸಿದಳು.

"ಏಕೆ ಮಗೂ ಈ ರೀತಿಯಿರುವೆ?" ಎಂದು ಕೇಳಿದಳು ವಿದರ್ಭದ ರಾಣಿ.

"ರಾತ್ರಿ ನಿದ್ದೆ ಸರಿಯಾಗಿ ಹಿಡಿಸಲಿಲ್ಲ ಕಕ್ಕಿ" ಎಂದಳು ರಾಜಕುಮಾರಿ.

"ಏನು? ಇಪ್ಪತ್ತು ಹಾಸಿಗೆಗಳನ್ನು ಪೇರಿಸಿ ಸಿದ್ಧಪಡಿಸಿದ ಸುಪ್ಪತ್ತಿಗೆಯ ಮೇಲೆ ಪವಡಿಸಿ ದರೂ ನಿದ್ದೆ ಬರಲಿಲ್ಲವೇ?' ಎಂದು ಕೇಳಿದಳು ವಿದರ್ಭದ ರಾಣಿ.

ಇಷ್ಟರಲ್ಲಿ ಕಾಶಿದೇಶದ ರಾಣಿ ಪ್ರವೇಶಿಸಿ, "ನೌಕರರು ಯಾವ ಕೆಲಸ ಮಾಡಿದರೂ ಸರಿ ಯಾಗಿ ಮಾಡುವುದಿಲ್ಲ. ಮಂಚದ ಮೇಲೆ ಬಟಾಣಿಬೀಜ ಇದ್ದರೆ ನೋಡದೆಯೇ ಹಾಸಿಗೆ ಗಳನ್ನು ಹಾಸಿ ಹೊರಟುಬಿಟ್ಟಿದ್ದಾರೆ, ಸೋಂ ಬೇರಿಗಳು. ಪಾಪ! ಇದರಿಂದ ನನ್ನ ಮುದ್ದು ಕಂದಮ್ಮನಿಗೆ ರಾತ್ರಿ ನಿದ್ದೆಯೇ ಬರಲಿಲ್ಲ" ಎಂದು ಬಟಾಣಿಬೀಜವನ್ನು ತೋರಿಸಿದಳು.

ವಿದರ್ಭರಾಣಿ ಜಯಂತನ ಹತ್ತಿರ ಹೋಗಿ ನಡೆದ ವಿಷಯವೆಲ್ಲವನ್ನೂ ಹೇಳಲು, ಆತನು ಕುಣಿದು ಕುಪ್ಪಳಿಸಿ, ಈ ಸಂಬಂಧವನ್ನು ಬೆಳೆಸುವಂತೆ ಹೇಳಿದ.

ಮರುದಿನವೇ ಒಳ್ಳೆ ಮುಹೂರ್ತವಿದ್ದುದ ರಿಂದ ಆ ಸುಕುಮಾರಿಗೂ ಜಯಂತನಿಗೂ ಅತಿ ವೈಭವದಿಂದ ವಿವಾಹವಾಯಿತು.





# ಪ್ರತಿಭಾವಂತ

ಗಂಡಕಿ ನದಿ ತೀರದಲ್ಲಿ ಒಂದು ದೊಡ್ಡ ಭವನ. ಆ ಭವನದಲ್ಲಿ ಗೋವರ್ಧನನೆಂಬ ರಾಜನಿದ್ದ. ಆ ರಾಜನಿಗೆ ಮಾಯಾ, ಛಾಯಾ ಎಂಬ ಇಬ್ಬರು ಕುವರಿಯರು. ಅಕ್ಕತಂಗಿಯರು ಇಬ್ಬರೂ ಒಂದೇ ಅಚ್ಚಿನಲ್ಲಿ ಎರಕ ಹೊಯ್ದಂತೆ ಇದ್ದುದರಿಂದ ಅವರಲ್ಲಿ ಮಾಯಾ ಯಾರೋ ಛಾಯಾ ಯಾರೋ ಗುಣಗಳಿಂದ ತಿಳಿದುಕೊಳ್ಳಬೇಕಾಗಿತ್ತೇ ಹೊರತು, ಮುಖ ನೋಡಿ ಹೇಳುವುದು ಕಷ್ಟಸಾಧ್ಯವಾಗಿತ್ತು.

ಅವರಿಗೆ ಯುಕ್ತವಯಸ್ಸು ಬಂತು. ಎಷ್ಟೋ ಸಾರಿ ಸ್ವಯಂವರ ಏರ್ಪಾಡು ಮಾಡಿದ ರಾಜ. ಆದರೆ ಅವರಿಗೆ ಯಾವ ರಾಜಕುಮಾರನೂ ಹಿಡಿಸಲಿಲ್ಲ. ರಾಜನಿಗೆ ಬೇಸರವಾಯಿತು.

ಒಂದು ದಿನ ಅವರನ್ನು ಕರೆದು "ನನ್ನ ಮುದ್ದು ಕಂದಮ್ಮಗಳಿರಾ, ನಿಮ್ಮ ಮದುವೆಯ ವಿಷಯದಲ್ಲಿ ನಾನಿನ್ನು ಕೈಹಾಕುವುದಿಲ್ಲ. ನೀವೇ ನಿಮ್ಮ ಗಂಡಂದಿರನ್ನು ಹುಡಿಕಿಕೊಳ್ಳಿ. ಇದಕ್ಕಾಗಿ ಅಗತ್ಯ ಬಿದ್ದರೆ ದೇಶಾಟನೆ ಬೇಕಾದರೂ ಮಾಡಿ, ನಾನು ಬೇಡವೆನ್ನುವುದಿಲ್ಲ" ಎಂದು ಗಂಭೀರವಾಗಿ ನುಡಿದ.

ಹೀಗಿರಲು ಒಂದು ದಿನ ಅಡವಿಗಳಲ್ಲಿ ಬೇಟೆಯಾಡುತ್ತಾ ಕೀರ್ತಿಕಾಂತನೆಂಬ ರಾಜಕುಮಾರನೊಬ್ಬನು ಆ ಪ್ರದೇಶಕ್ಕೆ ಬಂದ. ಆ ಸಮಯದಲ್ಲಿ ರಾಜಕುಮಾರಿಯರಿಬ್ಬರೂ ಚೆಂಡಾಟ ಆಡುತ್ತಿದ್ದರು. ಚೆಂಡನ್ನು ಯಾರು ಬಹಳ ಮೇಲಕ್ಕೆ ಎಸೆಯುವರೋ ಅವರು ಗೆದ್ದಂತೆ" ಎಂದು ಪಂದ್ಯ ಹಾಕಿಕೊಂಡರು.

ಅಲ್ಲೇ ಇದ್ದ ಕೀರ್ತಿಕಾಂತನು "ಒಸ್ಸಿ, ಇದೇನು ದೊಡ್ಡಸ್ತಿಕೆ? ಚೆಂಡು ಎಸೆದರೆ ಅದು ಹೋಗಿ ಮೇಘಮಂಡಲ ಮುಟ್ಟಬೇಕು" ಎಂದ. ರಾಜಕುಮಾರಿಯರು ಅದನ್ನು ಕೇಳಿ "ಬಡಾಯಿ ಕೊಚ್ಚಬೇಡಿ. ಕೈಯಲ್ಲಿ ಸಾಧ್ಯವಾದರೆ ಮಾಡಿತೋರಿಸಿ" ಎಂದರು.

"ನನಗೇನು ಬಹುಮಾನ ಕೊಡುವಿರೋ ಹೇಳಿ" ಎಂದ ಕೀರ್ತಿಕಾಂತ. ಆಗ ಅವರು ಆತನನ್ನು ತಮ್ಮ ತಂದೆಯ ಬಳಿಗೆ ಕರೆದುಕೊಂಡು ಹೋದರು.

ರಾಜನು ಆತನನ್ನು ಆದರದಿಂದ ಬರಮಾಡಿಕೊಂಡು ತನ್ನ ಉದ್ಯಾನವನದಲ್ಲಿ ಸ್ಪರ್ಧೆ ಏರ್ಪಡಿಸಿದ. ಮೊದಲು ರಾಜಕುಮಾರಿಯರು

ಪಿ. ಕಲ್ಯಾಣಸುಂದರಂ



ಚೆಂಡನ್ನು ಎಸೆದರು. ತರುವಾಯ ಕೀರ್ತಿಕಾಂತನು ಚೆಂಡನ್ನು ಎಸೆಯಲು, ಆತನ ಮಂತ್ರಪ್ರಭಾವದಿಂದ ಅದು ಮೇಘಮಂಡಲಕ್ಕೆ ಹೋಗಿ ಹಿಂದಕ್ಕೆ ಬರಲೇ ಇಲ್ಲ. ಆತನ ಪ್ರತಿಭೆಗೆ ಎಲ್ಲರೂ ಆಶ್ಚರ್ಯ ಹೊಂದಿದರು. ರಾಜನು ಸಂತೋಷಗೊಂಡು "ಎಲೈ ರಾಜಕುಮಾರನೇ, ನಿನ್ನನ್ನು ನೋಡಿದರೆ ತುಂಬಾ ಪ್ರತಿಭಾವಂತನಾಗಿ ಕಾಣುವೆ. ನನ್ನ ಕುವರಿಯರಿಬ್ಬರನ್ನೂ ವಿವಾಹವಾಗು. ಅರ್ಧ ರಾಜ್ಯ ಕೊಡುವೆನು" ಎಂದು ಕೇಳಿಕೊಂಡ.

ತಾವೂ ಸಹ ಅಷ್ಟಿಷ್ಟು ಮಂತ್ರ ವಿದ್ಯೆಯನ್ನು ಕಲಿತವರಾದರೂ ಕೀರ್ತಿಕಾಂತನನ್ನು ನೋಡಿದ ಕೂಡಲೇ ರಾಜಕುಮಾರಿಯರು 'ಮದುವೆಯಾದರೆ ಇಂತಹ ಪ್ರತಿಭಾವಂತನನ್ನೇ ಆಗಬೇಕು' ಎಂದು ಮನಸ್ಸಿನಲ್ಲಿ ಅಂದುಕೊಂಡರು. ಆದರೆ ಸೌಂದರ್ಯದಲ್ಲಿ ಇಬ್ಬರೂ ಒಂದೇ ರೀತಿಯಿದ್ದರೂ ಕೀರ್ತಿಕಾಂತನ ಮನಸ್ಸು ಅದೇನೋ ಛಾಯಕಡೆಗೇ ಎಳೆಯುತ್ತಿತ್ತು. ಆತನು ತನ್ನ ಮನಸ್ಸನ್ನು ಬಿಚ್ಚಿ ರಾಜನಿಗೆ ಹೇಳಿದ. ಅದಕ್ಕೆ ರಾಜನು "ಅಪ್ಪಾ, ಹಿರಿಯವಳಿಗೆ ಮದುವೆಯಾದ ಹೊರತು ಕಿರಿಯಾಕೆಗೆ ಮದುವೆ ಮಾಡಲು ಶಾಸ್ತ್ರ ಒಪ್ಪುವುದಿಲ್ಲ. ಆದ್ದರಿಂದ ಇಷ್ಟವಾದರೆ ಇಬ್ಬರನ್ನೂ ವಿವಾಹವಾಗು, ಇಲ್ಲ ಮಾಯಾದೇವಿಯನ್ನು ಮದುವೆಯಾಗು" ಎಂದ.

ಅದಕ್ಕೆ ಕೀರ್ತಿಕಾಂತ 'ಸರಿ, ನಿಮ್ಮ ಕುವರಿಯರನ್ನು ಮಂತ್ರ ವಿದ್ಯೆಯಲ್ಲಿ ನಾನೊಂದು ಪರೀಕ್ಷೆ ಮಾಡುತ್ತೇನೆ. ಮೂರು ದಿನಗಳಲ್ಲಿ ಯಾರು ತಮ್ಮ ಪ್ರತಿಭೆಯನ್ನು ತೋರಿಸುವರೋ ಅವರನ್ನು ವಿವಾಹವಾಗುವೆನು" ಎಂದು ಹೇಳಿದ. ರಾಜನೂ ಒಪ್ಪಿದ.

ಮರುದಿನ ಬೆಳಗಾಗುವ ವೇಳೆಗೆ ಕೀರ್ತಿಕಾಂತ ಅದೃಶ್ಯವಾಗಿಬಿಟ್ಟಿದ್ದ. ಆದರೆ ಮಾಯಾದೇವಿ ಕಣ್ಣುರೆಪ್ಪೆ ಮುಚ್ಚದೆ ಆತನ ಚಲನವಲನಗಳನ್ನು ಗಮನಿಸುತ್ತಲೇ ಇದ್ದಳು. ತಾನು ಅದೃಶ್ಯವಾಗುವುದು ಯಾರಿಗೂ ತಿಳಿಯದೆಂದು ನೆನೆಸಿದ್ದ ಕೀರ್ತಿಕಾಂತ. ಆದರೆ ಆತನಿಗೆ ತಿಳಿಯಂದತೆಯೇ ಹಿಂಬಾಲಿಸಿದಳು ಮಾಯಾ. ಸಮಯ ಬಿದ್ದಾಗ ಚುರುಕುತನ ತೋರಿಸುವೆ ಎಂದು ಛಾಯೆ ಮನೆಯಲ್ಲೇ ಉಳಿದು ತನ್ನ ಮಂತ್ರ ಪ್ರಭಾವದಿಂದ ಅವರಿಬ್ಬರ ಚರ್ಯೆಯನ್ನು ಗಮನಿಸುತ್ತಿದ್ದಳು.





ರಾತ್ರಿ ಹೊರಟ ಕೀರ್ತಿಕಾಂತನು ಹಿಂದಕ್ಕೆ ತಿರುಗಿಯೂ ಸಹ ನೋಡದೆ ಅಡವಿಯಲ್ಲಿ ಹಾರಿ ಹೋಗುತ್ತಿದ್ದ. ಮಾಯಾದೇವಿ ನೆರಳಿನಂತೆ ಆತನನ್ನು ಹಿಂಬಾಲಿಸುತ್ತಿದ್ದಳು. ಬೆಳಗಾದ ಕೂಡಲೇ ಆತನೊಂದು ಮಾವಿನಮರದ ಕೆಳಗೆ ವಿಶ್ರಾಂತಿ ತೆಗೆದುಕೊಳ್ಳಲು ಪ್ರಯತ್ನಿಸಿದ. ಅಷ್ಟರಲ್ಲಿ ತನ್ನ ಹೆಸರು ಹಿಡಿದು ಯಾರೋ ಕೂಗಿದಂತೆ ಕೇಳಿಸಿತು. ನಾಲ್ಕುಕಡೆಯೂ ನೋಡಿದ. ಯಾರೂ ಕಾಣಿಸಲಿಲ್ಲ. ಆದರೆ ಧ್ವನಿಮಾತ್ರ ಮಾಯಾದೇವಿಯದಂತೆ ಇತ್ತು.

ವಿಷಯ ಗ್ರಹಿಸಿದ ಕೀರ್ತಿಕಾಂತ, ಮರ ಹತ್ತಿ ಕುಳಿತ. ಮನುಷ್ಯರು ಯಾರೂ ಕಾಣಿಸಲಿಲ್ಲ. ಆದರೂ ತಾನು ಕುಳಿತಿದ್ದ ಮರವನ್ನು ಯಾರೋ ಕೊಡಲಿಯಿಂದ ಕಡಿಯುತ್ತಿರುವಂತೆ ಶಬ್ಧವಾಯಿತು. ಶಬ್ಧವಾಗುವುದು ಮಾತ್ರವಲ್ಲ. ಇನ್ನು ತುಸ ಕಾಲವಿಲಂಬ ಮಾಡಿದರೆ ಮರ ಮುರಿದು ಬೀಳುವುದು.

ಆತನು ಆಗ ಒಂದು ಕೊಂಬೆಯನ್ನು ಮುರಿದು ಮಂತ್ರಿಸಿ, ಅದರಮೇಲೆ ಕುಳಿತುಕೊಂಡ. ಅದು ವಿಮಾನದಂತೆ ಹಾರಿ ಹೋಯಿತು. ಕೀರ್ತಿಕಾಂತ ಯಾರ ಕೈಗೂ ಸಿಕ್ಕದಂತೆ ಗಗನಮಾರ್ಗದಲ್ಲಿ ಹೋಗುತ್ತಿರುವನು. ಆತನ ಹಿಂದೆಯೇ ಭೂಮಿಯಮೇಲೆ ಮಾಯಾದೇವಿ ಸಹಾ ಹೋಗುತ್ತಿದ್ದಾಳೆ.

ಪಾಪ, ಎಷ್ಟು ಹೊತ್ತೆಂದು ಹಾರುವನು ಕೀರ್ತಿಕಾಂತ. ಮಟಮಟ ಮಧ್ಯಾಹ್ನವಾಗುವ ವೇಳೆಗೆ ವಿಮಾನದಿಂದ ಇಳಿದು ಆತನು ಒಂದು ಹುಣಿಸೇ ಮರದ ಕೆಳಗೆ ವಿಶ್ರಾಂತಿ ಪಡೆಯಲು ಯತ್ನಿಸಿದ. ಆ ಮರದಲ್ಲಿ ಒಂದು ಪೊಟ್ಟರೆಯಿತ್ತು. ಆತನು ಆ ಪೊಟ್ಟರೆಯಲ್ಲಿ ನುಗ್ಗಿದ. ಒಂದು ಭಯಂಕರವಾದ ಸರ್ಪವನ್ನು ಹೊರಗೆ ಕಾವಲು ಇಟ್ಟ.

ಮಾಯಾದೇವಿ ಆ ಮರದ ಹತ್ತಿರ ಬಂದಳು. ಕೀರ್ತಿಕಾಂತನು ಈ ಮರದ ಪೊಟ್ಟರೆಯಲ್ಲಿರುವನೆಂದು ನಿರ್ಧರಿಸಿದಳು. ಆದರೆ ಕ್ರೂರಸರ್ಪವು ಕಚ್ಚುವುದಲ್ಲಾ ಹೇಗೆ? ಎಂದು ಯೋಚಿಸಿದಳು. ಮತ್ತೇನೂ ಮಾಡಲಾರದೆ, ಕೊಡಲಿಯಿಂದ ಮರವನ್ನು ಕಡಿಯಲು ಪ್ರಾರಂಭಿಸಿದಳು. ಉಕ್ಕನ್ನು ಮೀರಿಸಿದ ಆ ಗಟ್ಟಿಯಾದ ಮರ ಆಕೆಗೆ ಜಗ್ಗಲಿಲ್ಲ. ಕೊಡಲಿ ಚೂರು ಚೂರಾಯಿತು.



ಪೊಟ್ಟರೆಯಲ್ಲೇ ಕುಳಿತುಕೊಂಡು ಕೀರ್ತಿ ಕಾಂತ ಒಂದು ಬಾಣಬಿಟ್ಟ. ಆದರೆ ಮಾಯಾ ಕೂಡಲೇ ಒಂದು ತೋಳವಾಗಿ ರೂಪಾಂತರ ಹೊಂದಿ ವಿಕಾರವಾಗಿ ನಗುತ್ತಾ ಓಡಿಬಿಟ್ಟಿತು.

ಕೀರ್ತಿಕಾಂತನಿಗೆ ಹಸಿವಾಯಿತು. ಪೊಟ್ಟರೆಯಿಂದ ಹೊರಗೆ ಬಂದ. ಮೈಮೇಲಿದ್ದ ಬಟ್ಟೆಯನ್ನು ಕೆಳಗೆ ಹಾಸಿದ. ಈಗ ಅಡವಿಯೊಳಕ್ಕೆ ಹೋಗಿ ಬೇಟೆಯಾಡಿಕೊಂಡುಬರಲು ಸಮಯವಿಲ್ಲವೆಂದು, ಮೀನು ಹಿಡಿದುತರಲು ಗಂಡಕಿನದಿಗೆ ಹೊರಟ.

ಆತನು ಹಾಗೆ ಹೋಗಿ ಬರುವಷ್ಟರಲ್ಲಿ ಬಟ್ಟೆ ಹಾಸಿದ್ದ ಸ್ಥಳದಲ್ಲಿ ಒಂದು ಕುಟೀರ ವೆದ್ದಿತ್ತು. ಆ ಕುಟೀರದಿಂದ ಸುಂದರ ತರುಣಿ ಯೋರ್ವಳು ಆತನಿಗೆದುರಾಗಿ ಬಂದು "ರಾಜ ಕುಮಾರನೇ, ನಾನು ಈ ವನದ ಅಧಿಪತಿಯ ಮಗಳು. ಮಂತ್ರ ತಂತ್ರಗಳು ನಮಗೆ ವಂಶ ಪಾರಂಪರ್ಯವಾಗಿ ಬಂದ ಸ್ವತ್ತು. ನನ್ನ ಮಹಿಮೆಯಿಂದಲೇ ಈ ಕುಟೀರವನ್ನು ಸೃಷ್ಟಿಸಿದ್ದೇನೆ. ನಾನು ನಿನ್ನಸೇವೆ ಮಾಡುವ ಸಲುವಾಗಿ ಬಂದೆ. ಅಂಗೀಕರಿಸು" ಎಂದು ಹೇಳಿ ಆತನಿಂದ ಮೀನುಗಳನ್ನು ತೆಗೆದುಕೊಂಡಳು.

ಮೀನುಗಳನ್ನು ಅತಿರುಚಿಯಾಗಿ ಅಡಿಗೆ ಮಾಡಿದಳು. ಆದರೆ ಒಂದು ಚೂರಾದರೂ ಆತನಿಗೆ ಕೊಡದೆ ತಾನೇ ನುಂಗಿಬಿಟ್ಟಳು. ಈಗ ಕೂಗುವಳು, ಆಗ ಕೂಗುವಳು ಎಂದು ಕಾದುಕುಳಿತಿದ್ದ ಕೀರ್ತಿಕಾಂತನು ಹಸಿವು ತಾಳಲಾರದೆ ಅಡಿಗೆಯ ಮನೆಯೊಳಕ್ಕೆ ಹೋಗಿ ನೋಡಿದ. ವಿಷಯ ತಿಳಿದು ಹಸಿವಿನಿಂದ ದಹಿಸುತಿದ್ದ ಆತನಿಗೆ ಕೋಪ ತಡೆಯಲಾಗಲಿಲ್ಲ. ಆಕೆಯನ್ನು ಹಿಡಿದು ನಾಲ್ಕು ಒದೆಯೋಣವೆಂದುಕೊಳ್ಳುವಷ್ಟರಲ್ಲಿ ಆ ಕನ್ಯೆಯು ತೋಳದ ರೂಪ ಹೊಂದಿ, ವಿಕಟವಾಗಿ ನಗುತ್ತಾ ಓಡಿಬಿಟ್ಟಿತು. ಆ ತೋಳ ಮಾಯಾ ದೇವಿಯೆಂದು ತಿಳಿದುಕೊಂಡ ಕೀರ್ತಿಕಾಂತ.

ಮಾರನೇ ದಿನ ಮತ್ತೆ ಕೀರ್ತಿಕಾಂತ ಬಟ್ಟೆಯನ್ನು ಹರಡಿ, ಮೀನುತರಲು ಗಂಡಕಿನದಿಗೆ ಹೋದ. ಮೂರು ಮೀನುಗಳನ್ನು ಹಿಡಿದು ತಂದ. ಆತನು ಮರದ ಕೆಳಗೆ ಬರುವವೇಳೆಗೆ ಹಿಂದಿನ ದಿನದಂತೆಯೇ ಮತ್ತೆ ಒಂದು ಕುಟೀರ ಕಾಣಿಸಿತು. 'ಮಾಯಾವಿ ಮಾಯ ಮತ್ತೆ

ಬಂದಿರುವಳು' ಎಂದುಕೊಂಡು ಕೀರ್ತಿಕಾಂತ ಹಾಗೇ ನಿಂತುಬಿಟ್ಟ.

ಅಷ್ಟರಲ್ಲಿ ಕುಟೀರದಿಂದ ಸುಂದರ ಯುವತಿಯೊಬ್ಬಳು ತುಂಬಾ ವಿನಯದಿಂದ ಬಂದು, ಆತನ ಮುಂದೆ ನಿಂತುಕೊಂಡಳು. ನೋಡಲು ಈ ಕನ್ಯೆಯು ನಿನ್ನೆ ಕಾಣಿಸಿದಾಕೆಯ ಸೋದರಿ ಎಂಬಂತೆ ಕಾಣಿಸುತ್ತಿದ್ದಳು. ಆತನು ಮಾತನಾಡಲಿಲ್ಲ. ಆಕೆ ಆತನ ಕೈಯಿಂದ ಮೀನುಗಳನ್ನು ತೆಗೆದುಕೊಂಡು "ರಾಜಕುಮಾರನೇ, ನಾನು ಈ ವನದ ಅಧಿಪತಿಯ ಕಿರಿಯ ಕುವರಿ. ಮಂತ್ರ ತಂತ್ರಗಳು ವಂಶಪಾರಂಪರ್ಯವಾಗಿ ನಮಗೆ ಬಂದ ಸ್ವತ್ತು, ನನ್ನ ಮಂತ್ರಪ್ರಭಾವದಿಂದ ಈ ಕುಟೀರವನ್ನು ನಿರ್ಮಿಸಿದೆ. ನಿಮ್ಮ ಸೇವೆ ಮಾಡಲು ಬಂದಿರುವೆನು." ಎಂದಳು.

ಮಾಯಾದೇವಿಯೇ ಮತ್ತೆ ಈ ರೂಪದಿಂದ ಬಂದಿರುವಳೆಂದು ನೆನೆಸಿ, ಆತನು ತುಂಬಾ ಎಚ್ಚರಿಕೆಯಿಂದ ಇದ್ದ. ಆಕೆ ಕ್ಷಣಮಾತ್ರದಲ್ಲಿ ಅಡಿಗೆಮಾಡಿ ಆತನಿಗೆ ಬಡಿಸಿದಳು. ಆಕೆಯನ್ನೂ ಸಹ ತನ್ನ ಜೊತೆಯಲ್ಲಿ ಊಟಕ್ಕೆ ಕುಳಿತುಕೊಳ್ಳುವಂತೆ ಹೇಳಿದ.

ಅದಕ್ಕೆ ಆಕೆ "ನಿಮ್ಮ ಊಟ ಮುಗಿದ ತರುವಾಯ ನಾನು ಊಟಮಾಡುವೆನು. ಸ್ತ್ರೀಯರಿಗೆ ಅದೇ ಮರ್ಯಾದೆ. ಅದಷ್ಟೇ ಅಲ್ಲ. ನಾನು ಮೀನು ತಿನ್ನುವುದಿಲ್ಲ. ನಿಮ್ಮ ಮೇಲಿನ ಭಕ್ತಿಗೌರವಗಳಿಂದ ನಾನು ಅಡಿಗೆ ಮಾಡಿದೆನೇಹೊರತು ಅವುಗಳನ್ನು ಮುಟ್ಟಲೂ




ಸಹ ನನಗೆ ಇಷ್ಟವಿಲ್ಲ. ನನಗೊಂದು ಶಾಪವಿದೆ. ನದಿಯನೀರಿನ ಪ್ರವಾಹ ನನ್ನ ಕಾಲುಗಳನ್ನು ಸೋಕಿದ ಕೂಡಲೇ ನಾನೂ, ನನ್ನ ಸಂತತಿಯೂ ಸಹ ಮೀನುಗಳಾಗಿ ಬಿಡುತ್ತೇವೆ" ಎಂದು ಹೇಳಿದಳು.

ಆ ಮಾತುಗಳು ಆತನಿಗೆ ಹಿಡಿಸಿದವು. ಆಕೆಯು ಮಾಯಾದೇವಿಯಲ್ಲವೆಂದು ನಿಶ್ಚಯಿಸಿ ಆಕೆಯನ್ನು ವಿವಾಹವಾದ. ಆ ಕುಟೀರದಲ್ಲೇ ಸಂಸಾರ ಹೂಡಿದ. ಕೆಲಕಾಲಕ್ಕೆ ಅವರಿಗೆ ಇಬ್ಬರು ಮಕ್ಕಳಾದರು.

ಆಕೆ ಹೇಳಿದ ಶಾಪದ ವಿಷಯ ಸದಾ ಕೀರ್ತಿಕಾಂತನ ಮನಸ್ಸಿನಲ್ಲಿ ಸುಳಿದಾಡುತಿತ್ತು. ಅವರು ಎಲ್ಲಿಯಾದರೂ ನದಿ ದಾಟಬೇಕಾಗಿಬಂದರೆ, ಆಕೆಯ ಕಾಲುಗಳು ಒದ್ದೆಯಾಗದಂತೆ ಎತ್ತಿಕೊಂಡು ಹೋಗುವನು.

ಒಂದು ದಿನ ಹೆಂಡತಿ ಮಕ್ಕಳನ್ನು ಸಂಗಡ ಕರೆದುಕೊಂಡು ಕೀರ್ತಿಕಾಂತನು ಬೆಟ್ಟದ ಮೇಲೆ ಹೋಗಿ ಹಿಂದಿರುಗಿ ಬರುತ್ತಿದ್ದಾನೆ. ದಾರಿಯಲ್ಲಿ ಒಂದು ಸಣ್ಣ ಝುರಿ ದಾಟಬೇಕು. ಆತನು ಸುಲಭವಾಗಿ ದಾಟಬಿಟ್ಟ. ಹೆಂಡತಿ ಮಕ್ಕಳು ಹಿಂದೆ ಬರುತ್ತಿದಾರೆ. ಈ ಸಣ್ಣ ಕಾಲುವೆ ದಾಟಿದೇನು ಮಹಾ ಎಂದು ನೆನೆಸಿ ಆತನು ಮುಂದೆ ನಡೆಯುತ್ತಿದ್ದಾನೆ.

ಆದರೆ ಅಕಸ್ಮಾತ್ ಆಗಿ ಆ ಸಣ್ಣ ಝುರಿ ಪ್ರವಾಹದಂತೆ ಉಕ್ಕಿ ಹಿಂದೆ ಬರುತ್ತಿದ್ದವರ ಕಾಲುಗಳು ಒದ್ದೆಯಾದವು. ಕೂಡಲೇ ಮೂವರೂ ಮೂರು ಮೀನುಗಳಾಗಿ ಬದಲಾಯಿಸಿ, ನದಿಯಲ್ಲಿ ಸೇರಿಕೊಂಡರು. 'ಅಯ್ಯೋ, ತಪ್ಪಾಯಿತು. ಶಾಪದಿಂದ ತಪ್ಪಿಸಿಕೊಳ್ಳುವ ಮಾರ್ಗವಿಲ್ಲವೇ?' ಎಂದು ಆರ್ತನಾಗಿ ಕೇಳಿದ ಕೀರ್ತಿಕಾಂತ. "ಇದೆಲ್ಲಾ ಮಾಯೆ. ನನ್ನಿಂದೇನೂ ಸಾಧ್ಯವಿಲ್ಲ" ಎಂದಳಾಕೆ.

ಆಗ ಮಾಯಾದೇವಿ ಆತನ ಎದುರು ಬಂದು ನಿಂತು "ಈಗಲಾದರೂ ನಾನು ನಿಮಗೆ ಮೆಚ್ಚಿಕೆಯಾದೆನೇ? ನನ್ನನ್ನು ವಿವಾಹವಾಗುವಿರಾ?' ಎಂದು ಕೇಳಿದಳು. "ಎಂಥ ಕಷ್ಟವೇ ಬರಲಿ ನನ್ನ ಮನಸ್ಸು ಬದಲಾಯಿಸದು." ಎಂದು ಆತನು ಖಂಡ ತುಂಡವಾಗಿ ಹೇಳಿದ. ಆಗ ಭವಾನಿ ಪ್ರತ್ಯಕ್ಷವಾಗಿ "ಮಗೂ, ಕೀರ್ತಿಕಾಂತ, ಮಾಯಾ, ಛಾಯಾ ನನ್ನ ಅನುಗ್ರಹದಿಂದ ಜನಿಸಿದವರು. ರೂಪದಲ್ಲೂ ಗುಣದಲ್ಲೂ ಇವರಲ್ಲಿ ಬೇಧವಿಲ್ಲ. ನಿನ್ನಂತಹ ಪ್ರತಿಭಾನ್ವಿತನನ್ನು ಆರಿಸಿ ಮದುವೆಯಾಗುವಂತೆ ನಾನೇ ಅವರಿಗೆ ಸೂಚಿಸಿದೆ. ಮಾಯಾದೇವಿಯ ಪರೀಕ್ಷೆಗೆ ನೀನು ನಿಂತು ಜಯಶಾಲಿಯಾದೆ. ಇದುವರೆವಿಗೂ ನಿನ್ನ ಹೆಂಡತಿಯಾಗಿದ್ದವಳು ಛಾಯೆ. ಮಾಯಾದೇವಿಯನ್ನೂ ಸಹ ವಿವಾಹವಾಗಿ ಸುಖವಾಗಿರು." ಎಂದು ಆಶೀರ್ವಾದ ಮಾಡಿದಳು. ಅಷ್ಟರಲ್ಲಿ ಝುರಿಯ ನೀರೆಲ್ಲಾ ಬತ್ತಿಹೋಗಿ, ಛಾಯೂ, ಮತ್ತು ಮಕ್ಕಳು ಅಲ್ಲಿಗೆ ಬಂದರು. ಎಲ್ಲರೂ ಒಟ್ಟಾಗಿ ಹೊರಟು ಗೋವರ್ಧನ ಮಹಾರಾಜನನ್ನು ಸೇರಿಕೊಂಡರು.






**ದೇ**ವರಾಜಪುರದಲ್ಲಿ ಧನಪಾಲ ಶೆಟ್ಟಿ ಎಂಬಾತನಿದ್ದ. ಆತನಿಗೆ ಧನಮ್ಮನೆಂಬ ಪತ್ನಿ ಇದ್ದಳು. ಧನಪಾಲ ಶೆಟ್ಟಿಗೆ ವಯಸ್ಸಾದುದರಿಂದ ತನ್ನ ವ್ಯಾಪಾರವನ್ನೆಲ್ಲಾ ತನ್ನ ಇಬ್ಬರು ಮಕ್ಕಳಿಗೆ ಒಪ್ಪಿಸಿ, ಹೆಂಡತಿಯೊಂದಿಗೆ "ನೀನೂ ಸಹ ಮನೆಯ ಆಡಳಿತ ಸೊಸೆಯರ ಕೈಗೆ ಕೊಟ್ಟು, ನನ್ನೊಂದಿಗೆ ಬಾ, ದಿನಾ ಸಾಯಂಕಾಲದ ಹೊತ್ತು ಪುರಾಣ ಶ್ರವಣ ಮಾಡಿಕೊಂಡು ಬರೋಣ" ಎಂದ.

"ಅಗತ್ಯವಾಗಿ ಬರುತ್ತೇನೆ ಅಂದ್ರೆ, ಪುರಾಣ ತಾನೇ—ಹಣ ಕೊಟ್ಟು ಕೇಳುವುದೇನಲ್ಲ, ಬರೋಲ್ಲ ಅನ್ನೋಕೆ" ಎಂದು ದಿನಾ ಗಂಡನ ಸಂಗಡ ನರಸಿಂಹಸ್ವಾಮಿ ದೇವಾಲಯಕ್ಕೆ ಹೋಗಿ ಸುಬ್ಬಾಶಾಸ್ತ್ರಿಗಳ ಪುರಾಣ ಕೇಳಿ ಕೊಂಡು ಬರುತ್ತಿದ್ದಳು. ಪುರಾಣ ಆರಂಭಿಸಿ ಮುಗಿಸುವವರೆವಿಗೂ ಶೆಟ್ಟಿ ತುಂಬಾ ಶ್ರದ್ಧೆಯಿಂದ ಕೇಳುತ್ತಿದ್ದ. ಧನಮ್ಮ ಸಹ ಕೇಳುವಳು. ಆದರೆ ಆಕೆಗೆ ಒಂದೊಂದು ಸಾರಿ ಬೇಸರವಾಗಿ "ಹೋಗೋಣವೇ" ಎಂದು ಅನ್ನಿಸುವುದು. ಆದರೆ ಪುರಾಣ ಮುಗಿಯುವವರೆವಿಗೂ ಇದ್ದರೆ ಏನಾದರೂ ಚರುಪು ವಿನಿಯೋಗ ಸಿಕ್ಕುತ್ತಿದ್ದುದರಿಂದ, ಅದನ್ನು ಯಾಕೆ ಕಳೆದುಕೊಳ್ಳಲಿ ಎಂದು ಕೊನೆಯವರೆವಿಗೂ ಸಹನೆಯಿಂದ ಕೇಳುತ್ತಾ ಕುಳಿತಿರುತ್ತಿದ್ದಳು.

ಪ್ರಸಾದವಾಗಿ ಕೊಟ್ಟ ಕೋಸುಂಬರಿಯನ್ನೋ, ಪಂಚಾಮೃತವನ್ನೋ ಭದ್ರವಾಗಿ ತಂದು ಯಾವಾಗಲೂ ತನ್ನ ಮಗಳಾದ ಕಾವೇರಿ ಕೈಗೆ ಕೊಡುತ್ತಿದ್ದಳೇ ಹೊರತು, ಒಂದು ಸಾರಿಯಾದರೂ ಸೊಸೆಯರನ್ನು ಕುರಿತು 'ಕೊಳ್ಳಿ' ಎಂದು ಕೊಟ್ಟ ಪಾಪಕ್ಕೆ ಹೋಗಲಿಲ್ಲ.

ಕೊನೆಗೆ ಒಂದುದಿನ ಶೆಟ್ಟಿ ಬಾಯಿಮಾಡಿ "ಏನೇ ಇದು, ಒಂದು ಸಾರಿಯಾದರೂ ಸೊಸೆಯರ ಕೈಗೆ ಕೊಡಲಿಲ್ಲ ಪ್ರಸಾದಾನ? ಇದೇನಿದು ಪಕ್ಷಪಾತ ಎಂದು ಅವರು ಆಡಿಕೊಳ್ಳುವುದಿಲ್ಲವೇ? ಸೊಸೆಯರನ್ನೂ ಸಹ ಮಗಳ ಸಮಾನವಾಗಿ ನೋಡಿಕೊಳ್ಳಬೇಕು" ಎಂದ.

ಗಂಡ ಈ ರೀತಿ ಹೇಳಲು, ತನ್ನ ವಿಷಯ ಮನೆಯ ಗಂಡಸರಿಗೂ ತಿಳಿದು ಹೋಯಿತು,

ಕೆ. ಅಲಮೇಲು - ಜಯಪುರ.



ಸೊಸೆಯರನ್ನು ಚೆನ್ನಾಗಿ ನೋಡುತ್ತಿಲ್ಲವೆಂದು ಕುಮಾರರಿಗೆ ತಿಳಿದರೆ ತನ್ನಮೇಲಿನ ಗೌರವವು ಕಡಿಮೆಯಾಗುವುದೆಂದುಕೊಂಡು ‘ ಇನ್ನುಮುಂದೆ ತುಂಬಾ ಜಾಗರೂಕತೆಯಿಂದ ನಡೆದುಕೊಳ್ಳಬೇಕು ’ ಎಂದು ನಿಶ್ಚಯಿಸಿದಳು.

ಆಕೆ ಆ ನಿಶ್ಚಯಕ್ಕೆಬಂದ ಮರುದಿನವೇ ಪುರಾಣ ಹೇಳುವಾಗ ಶಾಸ್ತ್ರಿಗಳು ಶ್ರೀರಾಮ ಜನನವನ್ನು ಕುರಿತು ಈ ರೀತಿ ಹೇಳಿದರು. “ ಪುತ್ರರಿಗಾಗಿ ದಶರಥನು ಪುತ್ರಕಾಮೇಷ್ಠಿ ಯಾಗ ಮಾಡಲು, ಹೋಮ ಕುಂಡದಿಂದ ಅಗ್ನಿಯು ಬಂದು “ ಎಲೈ ರಾಜನೇ, ಈ ಪಾಯಸವನ್ನು ನಿನ್ನ ಭಾರ್ಯೆಯರಿಗೆ ಕೊಡು. ಅವರು ಗರ್ಭವತಿಯರಾಗಿ ಪುತ್ರರನ್ನು ಹಡೆಯುವರು ” ಎಂದು ಹೇಳಿ ಒಂದು ಪಾತ್ರೆ ಯನ್ನು ದಶರಥನಿಗೆ ಕೊಟ್ಟು ಅದೃಶ್ಯನಾದನು. ರಾಜನು ಆ ಪಾಯಸವನ್ನು ಎರಡು ಭಾಗ ಮಾಡಿ ಅರ್ಧ ಕೌಸಲ್ಯಾದೇವಿಗೆ ಕೊಟ್ಟು, ಉಳಿದರ್ಧ ಕೈಕೇಯಿಗೆ ಕೊಟ್ಟು ಸುಮ್ಮನಾದ. ಸುಮಿತ್ರಳಿಗೆ ಏನೂ ಕೊಡಲಿಲ್ಲ. ಆದರೇನು? ಕೌಸಲ್ಯ ತನ್ನ ಪಾಲಿನಲ್ಲಿ ಅರ್ಧ ತೆಗೆದು ಸುಮಿತ್ರೆಗೆ ಕೊಟ್ಟಳು. ಕೈಕೇಯಿ ಸಹ ಅದೇ ರೀತಿ ಮಾಡಿದಳು. ಈ ವಿಧವಾಗಿ ಕಡೆಗೆ ಸುಮಿತ್ರೆಗೇ ಹೆಚ್ಚು ಬಂತು. ಆಕೆಗೆ ಎರಡು ಪಾಲು ಬಂದಿದ್ದರಿಂದ ಇಬ್ಬರು ಮಕ್ಕಳು ಜನಿಸಿದರು. ಕೌಸಲ್ಯ ಮತ್ತು ಕೈಕೇಯಿಗೆ ಒಬ್ಬೊಬ್ಬ ಮಗನೇ ಹುಟ್ಟಿದನು ”

ಈ ಕಥೆ ಕೇಳಿದ ತರುವಾಯ ಧನಮ್ಮನಿಗೆ ಒಂದು ಯೋಚನೆ ಹೊಳೆಯಿತು. ದಶರಥನಿಗೆ ಸುಮಿತ್ರೆಯ ಮೇಲೆ ಹೆಚ್ಚು ಪ್ರೀತಿಯಿದ್ದುದ ರಿಂದ, ಅತ್ತ ಪಟ್ಟದರಸಿಯಾದ ಕೌಸಲ್ಯೆ ಮೇಲೂ, ಇತ್ತ ಮುದ್ದಿನ ಮಡದಿಯಾದ ಕೈಕೇಯಿಯ ಮೇಲೂ ಪ್ರೇಮ ನಟಿಸಿ, ಕಡೆಗೆ ಸುಮಿತ್ರೆಗೆ ಎರಡುಪಾಲು ಬರುವಂತೆ ಹಂಚಿಕೆ ಹೂಡಿದ. ಚಾಲಾಕುತನವೆಂದರೆ ಹಾಗಿರಬೇಕು ಎಂದು ಆಕೆ ಅರಿತುಕೊಂಡಳು. ತಾನೂ ಸಹ ದಶರಥನಂತೆಯೇ ಚಾಲಾಕು ತೋರಿಸಿ, ಸೊಸೆಯಂದಿರಮೇಲೆ, ಮಗಳಮೇಲಿರುವು ದಕ್ಕಿಂತಲೂ ಹೆಚ್ಚು ಪ್ರೀತಿಯಿರುವಂತೆ ನಟಿಸಬೇಕೆಂದು ನಿರ್ಧಾರ ಮಾಡಿದಳು,

ಆದಿನ ಪುರಾಣ ಮುಗಿದಕೂಡಲೇ ತಲಾ ಒಂದೊಂದು ಕಿತ್ತಲೆ ಹಣ್ಣನ್ನು ಪ್ರಸಾದವಾಗಿ ಕೊಟ್ಟರು. ಪದ್ಧತಿಯಂತೆ ಧನಪಾಲ ಶೆಟ್ಟಿ

ತನ್ನ ಪಾಲಿಗೆ ಬಂದ ಪ್ರಸಾದವನ್ನು ಹೆಂಡತಿಯ ಕೈಯಲ್ಲಿಟ್ಟ. ಆಕೆ ಮನೆಗೆ ಹೋದ ಕೂಡಲೇ ವಾಡಿಕೆಯಂತೆ ಆ ಹಣ್ಣುಗಳನ್ನು ಕಾವೇರಿಗೆ ಕೊಡಲಿಲ್ಲ. ಹಿರಿಯ ಸೊಸೆ ರಾಜಮ್ಮನಿಗೆ ಒಂದು ಹಣ್ಣನ್ನೂ, ಕಿರಿಸೊಸೆ ನಾಗಮ್ಮನಿಗೆ ಇನ್ನೊಂದನ್ನೂ ಕೊಟ್ಟಳು.

ಇಬ್ಬರು ಸೊಸೆಯರೂ ಆಶ್ಚರ್ಯ ಹೊಂದಿದರು. "ಇದೇನು ಅತ್ತೆ, ದಿನಾ ಕಾವೇರಿಗೆ ಕೊಡುತ್ತಿದ್ದವರು ಇಂದು ನಮಗೆ ಕೊಟ್ಟುಬಿಟ್ಟರಿ" ಎಂದು ಸ್ಪಷ್ಟವಾಗಿ ಕೇಳಿಬಿಟ್ಟರು.

ಅದಕ್ಕೆ ಅತ್ತೆ ಹೇಳಿದಳು! "ಇದುವರೆವಿಗೂ ತರುತ್ತಿದ್ದ ಚರುಪು ತೀರಾ ಸ್ವಲ್ಪವಾಗಿರುತಿತ್ತು. ಅದು ನಿಮಗೆ ಹಂಚಿದರೆ ಕೈಜಿಡ್ಡಾಗುವುದೇ ಹೊರತು ಬಾಯಲ್ಲಿ ಹಾಕಿಕೊಂಡಂತೆ ಆಗುವುದಿಲ್ಲವೆಂದು ನನಗೆ ಗೊತ್ತು. ಆದುದರಿಂದಲೇ ಅವಳ ಕೈಗೆ ಕೊಡುತ್ತಿದ್ದೆ. ಇಂದು ತಲಾ ಒಂದೊಂದು ಹಣ್ಣು ಕೊಟ್ಟರು. ಆದುದರಿಂದ ನಿಮಗೆ ಕೊಟ್ಟೆ."

"ಸರಿ, ಹಾಗೋ—ನಾದಿನಿಗೆ ಇಲ್ಲದೆ ನಮಗೆ ಕೊಡುವುದುಂಟೇ?" ಎಂದರು ಸೊಸೆಯಂದಿರು.

"ನಾದಿನಿಗೆ ಬೇರೆ ಭಾಗವೇನ್ರೇ? ನೀವಿಬ್ಬರೂ ತಲಾ ಒಂದಿಷ್ಟು ಕೊಟ್ಟರೂ ಸರಿಹೋಯ್ತು" ಎಂದು ತಲೆ ಆಡಿಸುತ್ತಾ ನುಡಿದಳು ಅತ್ತೆ.

"ಹೌದು ಕಣತ್ತೆ. ಅಷ್ಟು ನಮಗೆ ಬುದ್ಧಿ ಓಡಲೇ ಇಲ್ಲ" ಎಂದು ಹೇಳಿ,




ರಾಜಮ್ಮ ಮತ್ತು ನಾಗಮ್ಮ ತಮ್ಮ ಪಾಲಿಗೆ ಬಂದಿದ್ದರಲ್ಲಿ ಕಾವೇರಿಗೆ ಅಷ್ಟಷ್ಟು ಕೊಟ್ಟರು.

ಧನಮ್ಮ ಸೊಸೆಯಂದಿರ ಕೈಯಲ್ಲಿ ತಲಾ ಒಂದೊಂದು ಹಣ್ಣು ಕೊಡುತ್ತಿದ್ದುದನ್ನು ನೋಡಿ ಧನಪಾಲ ಶೆಟ್ಟಿ ಮತ್ತು ಆತನ ಮಕ್ಕಳು ಆಕೆಯ ಧಾರಾಳ ಹೃದಯಕ್ಕೆ ಸಂತೋಷಪಟ್ಟರು. ಆದರೆ ಅವರಿಗೆ ಆಮೇಲೆ ನಡೆದ ವಿಷಯ ತಿಳಿಯಲಿಲ್ಲ.

ಧನಮ್ಮ ಮಾತ್ರ ತನ್ನ ಹಂಚಿಕೆ ಫಲವಾದುದನ್ನು ಕಂಡು ತನ್ನನ್ನು ತಾನೇ ಮೆಚ್ಚಿಕೊಂಡಳು. "ಪುರಾಣ ಕೇಳಿದುದರಿಂದಲೇ ನನಗೆ ಈ ಉಪಾಯ ತೋರಿತು. ಹಿರಿಯರು ಸುಮ್ಮನೆ ಹೇಳಿದರೇ ಪುರಾಣ ಓದಿ ಅಂತ! ಇಂತಹ ಲಾಭವಾಗುವುದೆಂತಲೇ ಕೇಳುವಂತೆ ಹೇಳಿದರು" ಎಂದುಕೊಂಡು ಸಂತೋಷಪಟ್ಟಳು.




ಸ್ವರ್ಗದಲ್ಲಿ ದೇವೇಂದ್ರನಿಗೆ ಅಧಿಕಾರ ಬಂದ ಕೂಡಲೇ ಎಲ್ಲಾ ಲೋಕಗಳ ವಿಷಯದಲ್ಲಿ ತಾನು ಕೈಗೊಳ್ಳಬೇಕಾದ ಏರ್ಪಾಟುಗಳೆಲ್ಲವನ್ನೂ ಮಾಡಿ, ಕೊನೆಗೆ ಭೂಲೋಕದಲ್ಲಿರುವ ಪ್ರಜೆಗಳಿಗೆ ಯಾವರೀತಿ ಸೌಖ್ಯವನ್ನುಂಟುಮಾಡಲಿ ಎಂದು ಆಲೋಚಿಸಿ, ಏಳು ತಾರೆಗಳನ್ನು ಮುಂದೆಬರುವಂತೆ ಹೇಳಿದ. ಅವು ಬಂದು ಕೈಕಟ್ಟಿಕೊಂಡು, ಸಾಲಾಗಿ ನಿಂತವು.

ಆ ಏಳು ನಕ್ಷತ್ರಗಳು ಸಾಲಾಗಿ ನಿಂತಿರಲು ದೇದೀಪ್ಯಮಾನವಾಗಿ ಬೆಳಕುಂಟಾಯಿತು. ಭೂಲೋಕದಲ್ಲಿದ್ದ ಜನ ತಲೆ ಎತ್ತಿ ಆಕಾಶದ ಕಡೆ ನೋಡಿದರು. ಆ ಬೆಳಕನ್ನು ಕಂಡು ಅವರು ಆಶ್ಚರ್ಯಪಟ್ಟುದು ಮಾತ್ರವಲ್ಲದೆ, ಇದು ಯಾವುದೋ ಪ್ರಳಯದ ಸಂಕೇತವಿರಬಹುದೆಂದು ಭಯಗೊಂಡರು.

ಏಳು ನಕ್ಷತ್ರಗಳು ಏಕಕಂಠದಿಂದ "ಏನಪ್ಪಣೆ ಮಹಾಪ್ರಭೂ" ಎಂದು ಕೇಳಿದವು.

"ಭೂಲೋಕದಲ್ಲಿರುವ ಜನರಿಗೆ ಸುಖಶಾಂತಿಗಳನ್ನು ದಯೆಪಾಲಿಸಬೇಕೆಂದು ಯೋಚಿಸಿರುವೆನು. ಪುಗಸಟ್ಟೆಯಾಗಿ ಕೊಟ್ಟರೆ ಯಾವುದಕ್ಕೂ ಬೆಲೆಯಿರುವುದಿಲ್ಲ. ಆದುದರಿಂದ ನೀವು ಹೋಗಿ ನಾನು ಕೊಡುವ ವಸ್ತುಗಳನ್ನು ಮಾರಿ ಬರಬೇಕು" ಎಂದ ದೇವೇಂದ್ರ.

"ಆಗಲೀ ಮಹಾಪ್ರಭೂ" ಎಂದವು ಮೃದುಮಧುರ ಕಂಠದಿಂದ ಆ ಏಳು ನಕ್ಷತ್ರಗಳು. ಆಶ್ಚರ್ಯದಿಂದ ಆಕಾಶದಕಡೆ ನೋಡುತ್ತಿದ್ದ ಭೂಲೋಕದ ಪ್ರಜೆಗಳಿಗೆ ಸ್ವರ್ಗದಲ್ಲಿ ಅಮರಗಾನವಾದಂತೆ ಕೇಳಿಸಿತು.

ಸಾಲಾಗಿ ನಿಂತಿದ್ದವು ತಾರೆಗಳು. ಮೊದಲನೇ ನಕ್ಷತ್ರಕ್ಕೆ ದೇವೇಂದ್ರ ಒಂದು ಅಂದವಾದ ಡಬ್ಬಿಯನ್ನು ಕೊಟ್ಟ. 'ಇದೋ ಇದು ಹಾಸ್ಯರಸ. ಇದನ್ನು ಸೇವಿಸಿದವರಿಗೆ ಸಂತೋಷ ಕೊಡುತ್ತದೆ. ಸಂತೋಷವೇ ಮಾನವನಿಗೆ ಬಲ' ಎಂದ. ಎರಡನೇ ನಕ್ಷತ್ರಕ್ಕೆ ಒಂದು ಡಬ್ಬಿ ಕೊಟ್ಟು 'ಇದು ಸೌಶೀಲ್ಯ. ಇದು ಪ್ರಾಣಿಗೆ ಜೀವ' ಎಂದ. ಮೂರನೇ ತಾರೆಗೊಂದು ಡಬ್ಬಿ ಕೊಟ್ಟು 'ಇದು ಆರೋಗ್ಯ. ಆರೋಗ್ಯವೇ ಮಹಾಭಾಗ್ಯ' ಎಂದ. ನಾಲ್ಕನೇ ನಕ್ಷತ್ರಕ್ಕೊಂದು ಡಬ್ಬಿ ಕೊಟ್ಟು 'ಇದು ಚಿರಂಜೀವಿತ್ವ. ಬದುಕಿ

ಸುಖವಾಗಿದ್ದರೇನೇ ಯಾವಜೀವಿಯಾದರೂ ಘನಕಾರ್ಯ ಮಾಡಬಲ್ಲದು' ಎಂದ. ಐದನೇ ನಕ್ಷತ್ರಕ್ಕೆ ಒಂದು ಡಬ್ಬಿ ಕೊಟ್ಟು 'ಇದು ಕೀರ್ತಿ. ಮಾನವನಿಗೆ ಹೆಸರು ಪ್ರತಿಷ್ಠೆ ತರುತ್ತದೆ' ಎಂದ. ಆರನೇದಕ್ಕೆ ಡಬ್ಬಿ ಕೊಟ್ಟು ಈ ರೀತಿ ಹೇಳಿದ: 'ಇದು ಆನಂದ. ಇದಕ್ಕಾಗಿ ಮಹರ್ಷಿಗಳೂ ಸಹ ತಾಪತ್ರಯ ಪಡುತ್ತಿರುತ್ತಾರೆ.' ಏಳನೇ ತಾರೆಗೆ 'ಇದು ಐಶ್ವರ್ಯ. ಜೀವನ ಸಾಗಿಸಲು ಅಗತ್ಯವಾದ ಸಾಧನ' ಎಂದು ಒಂದು ಡಬ್ಬಿ ಕೈಗೆಕೊಟ್ಟ.

ಏಳು ನಕ್ಷತ್ರಗಳೂ ಭೂಲೋಕಕ್ಕೆ ಇಳಿದು ಡಬ್ಬಿಗಳಲ್ಲಿದ್ದ ಸರಕುಗಳನ್ನು ಮಾರಲು ಪ್ರಯತ್ನಿಸಿದವು. ನಾಲ್ಕನೇ ನಕ್ಷತ್ರ ಬೀದಿಯಲ್ಲಿ ಹೋಗುತ್ತಾ 'ದೀರ್ಘಜೀವನ ಬೇಕೇ?, ದೀರ್ಘಾಯಸ್ಸು ಬೇಕೇ?' ಎಂದು ಕೂಗಲು, 'ನಮಗೆ ಬೇಕು, ನಮಗೆ ಬೇಕು' ಎಂದು ಓಡೋಡಿ ಬಂದರು ಜನ.

"ನನ್ನ ಸಹೋದರಿಯರು ವಿಕ್ರಯಿಸಿದ ವಸ್ತುಗಳನ್ನು ತೆಗೆದುಕೊಂಡಿರಾ ನೀವು? ಹಿರಿಯಕ್ಕ ಹಾಸ್ಯರಸವನ್ನೂ, ಎರಡನೆಯವಳು ಸೌಶೀಲ್ಯವನ್ನೂ, ಇತರರು ಆರೋಗ್ಯ, ಕೀರ್ತಿ, ಆನಂದ ಐಶ್ವರ್ಯವನ್ನೂ, ಮಾರುತ್ತಿದ್ದಾರೆ. ಅವುಗಳನ್ನು ನೀವು ಕೊಂಡು ಕೊಳ್ಳಲಿಲ್ಲವೇ?' ಎಂದು ಕೇಳಿದಳು. ಅವರೆಲ್ಲಾ ಇಲ್ಲವೆಂದು ತಲೆ ಆಡಿಸಿದರು.

'ಅವುಗಳಿಲ್ಲದೆ ಈ ಡಬ್ಬಿಯಲ್ಲಿರುವ ವಸ್ತು ನಿಮಗೆ ಉಪಯೋಗವಾಗುವಂತಿಲ್ಲ. ಅವೆಲ್ಲ ಇದ್ದರೇನೇ ಈ ದೀರ್ಘಜೀವನ ಸೇವಿಸಿದರೆ ಸಾರ್ಥಕವಾಗುತ್ತದೆ. ಹೋಗಿ, ನಡೆಯಿರಿ ಇಲ್ಲಿಂದ' ಎಂದು ಡಬ್ಬಿಯ ಮುಚ್ಚಳವನ್ನು ಹಾಕಿದಳು ನಾಲ್ಕನೇ ತಾರೆ. ಆದರೆ ಮಾದರಿಗಾಗಿ ಕೈಯಲ್ಲಿಟ್ಟುಕೊಂಡಿದ್ದ ವಸ್ತುವನ್ನು ಮತ್ತೆ ಡಬ್ಬಿಯಲ್ಲಿ ಹಾಕುವುದು ಬೇಸರವೆನಿಸಿತು ಆ ನಕ್ಷತ್ರಕ್ಕೆ—ಆಕೆಗೆ ಒಂದು ಗಿಡದ ರೆಂಬೆಯಮೇಲೆ ಒಂದು ಗಿಳಿ ಕಾಣಿಸಿತು. ಆ ನಾಲ್ಕನೇ ತಾರೆ ನಸುನಗುತ್ತಾ ಅದರ ಬಳಿ ಹೋಗಿ ಅದರ ಕೊಕ್ಕಿನಹತ್ತಿರ ತನ್ನ ಕೈಯಲ್ಲಿ ಉಳಿದುಕೊಂಡಿದ್ದ ವಸ್ತುವನ್ನು ಇಟ್ಟಳು. ಗಿಳಿ ಅದನ್ನು ತಿಂದುಬಿಟ್ಟಿತು. ಅಷ್ಟು ಸ್ವಲ್ಪವಸ್ತುವನ್ನು ಸೇವಿಸಿದಮಾತ್ರಕ್ಕೇ ಆ ಗಿಳಿ 300 ವರ್ಷ ಜೀವಿಸಲು ಸಾಧ್ಯವಾಯಿತು. ಅಂದಿನಿಂದ ಗಿಳಿಗಳು ಬಹಳ ಕಾಲ ಜೀವಿಸುತ್ತಿರುವವು.





# ಕೆಲಸಕ್ಕೆ ಬಾರದ ಪುಸ್ತಕ

ಸರ್ವಜ್ಞಪಾಲನು ಅಪೂರ್ವಮೇಧಾವಿ. ಮಂತ್ರ ತಂತ್ರಗಳಿಂದ ಅನೇಕ ಘನಕಾರ್ಯಗಳನ್ನು ಸಾಧಿಸಬಲ್ಲವನು. ಯಾವ ಚಿಕಿತ್ಸೆಗೂ ಗುಣಹೊಂದದ, ದೀರ್ಘಕಾಲದ ವ್ಯಾಧಿಗಳನ್ನು ಆತನು ತನ್ನ ಅಮೋಘವಾದ ಶಕ್ತಿಯಿಂದ ಗುಣಪಡಿಸುತ್ತಿದ್ದನು. ಯಾವತ್ತೂ ಶಕ್ತಿ ಸಾಮರ್ಥ್ಯಗಳನ್ನು ಪ್ರಜಾಕೋಟಿಯ ಮೇಲ್ಮೆಗಾಗಿ ವಿನಿಯೋಗಿಸಿದ ರಾಜರಲ್ಲಿ ಸರ್ವಜ್ಞಪಾಲನು ಮೊದಲನೆಯವನು.

ಆತನಕೀರ್ತಿ ದೇಶವಿದೇಶಗಳಲ್ಲಿ ವ್ಯಾಪಿಸಿ, ಖಂಡಾಂತರಗಳಲ್ಲೂ ಸಹ ಹಬ್ಬಿತು. ಆ ಕಾಲದ ವೈದ್ಯ, ವೇದಾಂತ, ಖಗೋಳ ಶಾಸ್ತ್ರಜ್ಞರಿಗೆ ತಿಳಿಯದ ಪ್ರತಿ ಕ್ಲಿಷ್ಟಸಮಸ್ಯೆಗಳನ್ನು ಸರ್ವಜ್ಞಪಾಲನು ಕ್ಷಣಮಾತ್ರದಲ್ಲಿ ಬಿಡಿಸುತ್ತಿದ್ದನು.

ಇಂತಹ ಅದ್ಭುತ ಶಕ್ತಿಯನ್ನು ಪಡೆಯಲು ಮಾನವ ಮಾತ್ರನಿಂದ ಸಾಧ್ಯವೇ ಎಂದು ಅನುಮಾನ ಇತರ ರಾಜರಿಗೂ, ಪಂಡಿತರಿಗೂ ಉಂಟಾಯಿತು. ರಾಜನು ತಿಳಿಗೇಡಿ ಎಂತಲೂ ಅವರ ಅಭಿಪ್ರಾಯವಾಗಿತ್ತು. ಆದುದರಿಂದ ಸ್ವತಃ ಪರೀಕ್ಷೆ ಮಾಡಿ ತಿಳಿದುಕೊಳ್ಳಬೇಕೆಂದು ಅವರೆಲ್ಲಾ ಒಂದುಸಾರಿ ಸರ್ವಜ್ಞಪಾಲನ ಸಭೆಗೆ ಬಂದರು.

ಸರ್ವಜ್ಞಪಾಲನು ಎಲ್ಲರನ್ನೂ ಉಚಿತ ರೀತಿಯಿಂದ ಸತ್ಕರಿಸಿದ. ಒಂದು ದಿನ ದರ್ಬಾರು ಏರ್ಪಡಿಸಿದ.

ಆಯಾದೇಶದ ರಾಜರೂ, ಪಂಡಿತರೂ ಉಚಿತಾಸನಗಳನ್ನು ಅಲಂಕರಿಸಿದರು. ಉಚಿತಾನುಚಿತ ಪ್ರಶ್ನೆಗಳಿಂದ ಸರ್ವಜ್ಞಪಾಲನನ್ನು ಅಗ್ನಿಪರೀಕ್ಷೆಗೆ ಗುರಿಮಾಡಿದರು. ತಾಳ್ಮೆ ಮತ್ತು ಸಹನೆಗಳಿಂದ ಸರ್ವಜ್ಞಪಾಲನು ತಕ್ಕ ನಿದರ್ಶನಗಳಿಂದ ಎಲ್ಲರನ್ನೂ ಸಂತೃಪ್ತಿಪಡಿಸಿದನು. ಸಭೆ ನಿಶಬ್ಧವಾಗಿತ್ತು. ಎಲ್ಲರೂ ಸಂಶಯರಹಿತರಾದಂತೆ ಕಾಣಿಸಿತು. ಸರ್ವಜ್ಞಪಾಲನು ಸಿಂಹಾಸನದಿಂದೆದ್ದು ಎಲ್ಲರಕಡೆ ನಸುನಗೆ ಬೀರುತ್ತಾ ಒಂದುಸಾರಿ ನೋಡಿದ.

ಸಭೆಯಲ್ಲಿ ಒಂದು ಮೂಲೆಯಲ್ಲಿ ತುಸಸದ್ದು ಗಲಭೆ ಆಯಿತು, 'ನೀನೋ' 'ನಾನೋ' ಎನ್ನುತ್ತಾ ಮಾರುದ್ದ ಗಡ್ಡದ ಪಂಡಿತನೂ, ಭಾರಿ ಮೀಸೆಯ ಒಬ್ಬ ರಾಜನೂ ಎದ್ದುನಿಂತು

ಜಿ. ವಿ. ಹರನಾಥ

ಕೊಂಡರು. ಸರ್ವಜ್ಞಪಾಲನು ಅವರಕಡೆ ಪ್ರಶ್ನಾರ್ಥಕವಾಗಿ ನೋಡಿದ.

"ಯಾವ ಜೀವಿಯನ್ನಾದರೂ ಕೊಂದು ಬದುಕಿಸುವಿರಾ?" ಎಂದು ಆ ಪಂಡಿತನೂ, ಆ ರಾಜನೂ ಕೇಳಿದರು.

"ಓ" ಎಂದು ತಡವರಿಸದೆ ಹೇಳಿದ ಸರ್ವಜ್ಞಪಾಲ. ತರುವಾಯ ಆ ಇಬ್ಬರಕಡೆ ನೋಡುತ್ತಾ ಹೀಗೆ ಪ್ರಶ್ನೆಮಾಡಿದ. "ನಿಮ್ಮಲ್ಲಿ ಯಾರು ಆ ಪರೀಕ್ಷೆಗೆ ಸಾಧನವಾಗುವಿರಿ?" ಎಂದು ಕೇಳಿದ.

ರಾಜ ಮತ್ತು ಪಂಡಿತ ಒಬ್ಬರಮುಖ ಒಬ್ಬರು ನೋಡಿಕೊಂಡರು. ಸಭೆಯಕಡೆ ದೃಷ್ಟಿ ಹರಿಸಿ ಅಚ್ಚರಿಯಿಂದ, ಏನೂ ಮಾತನಾಡಲಾರದೆ ತಮ್ಮ ತಮ್ಮ ಆಸನಗಳಲ್ಲಿ ಕುಳಿತು ಬಿಟ್ಟರು. ಅವರನ್ನು ನೋಡಿ ಸರ್ವಜ್ಞಪಾಲ ನಸುನಕ್ಕ. "ಮಾನವರಲ್ಲಿ ಮಾತ್ರವೇ ಅಲ್ಲದೆ ಪಶುಪಕ್ಷಿಗಳಲ್ಲೂ ಸಹ ಜೀವವೆಂಬವಸ್ತುವಿದೆಯಲ್ಲವೇ?" ಎಂದು ಸಭಾಸದರನ್ನು ಪ್ರಶ್ನೆಮಾಡಿದ. ಸಭೆ ಏಕಕಂಠದಿಂದ "ಅಹುದು, ನಿಜ," ಎಂದಿತು. ಸರ್ವಜ್ಞಪಾಲನು ಹಿಂದೆ ತಿರುಗಿ ನೋಡಿದ. "ಪ್ರಭೂ, ಏನಪ್ಪಣೆ" ಎಂದು ಸೇವಕನು ಮುಂದೆ ಬಂದ.

"ನಮ್ಮ ತೋಟದಲ್ಲಿರುವ ಹುಂಜಗಳಲ್ಲಿ ಒಂದನ್ನು ತೆಗೆದುಕೊಂಡು ಬಾ" ಎಂದು ಆಜ್ಞಾಪಿಸಿದ ಸರ್ವಜ್ಞಪಾಲ.

ಐದು ನಿಮಿಷ ಐದು ಯುಗಗಳಂತೆ ತೋರಿತು ಆ ಸಭೆಯಲ್ಲಿ ನೆರೆದಿದ್ದ ರಾಜರು ಮತ್ತು ಪಂಡಿತರಿಗೆ. "ಈ ಪರೀಕ್ಷೆಯಿಂದ ಇವನ



ಬಂಡವಾಳ ಹೊರಗೆ ಬೀಳುತ್ತದೆ" ಎಂದೊಬ್ಬ ರಾಜ ತನ್ನ ಪಕ್ಕದಲ್ಲಿ ಕುಳಿತಿದ್ದ ಮತ್ತೊಬ್ಬ ರಾಜನ ಕಿವಿಯಲ್ಲಿ ಹೇಳಿದ. "ಈ ಪರೀಕ್ಷೆಯಿಂದ ಸರ್ವಜ್ಞಪಾಲನ ದೊಡ್ಡಸ್ತಿಕೆ ತಿಳಿದು ಹೋಗುತ್ತಪ್ಪ" ಎಂದು ಪಿಸುಗುಟ್ಟಿದ ಒಬ್ಬ ಪಂಡಿತ ಪಕ್ಕದ ಪಂಡಿತನೊಂದಿಗೆ.

ಹುಂಜದೊಂದಿಗೆ ಸೇವಕನು ಆಸ್ಥಾನವನ್ನು ಪ್ರವೇಶಿಸಿದ. ಸರ್ವಜ್ಞಪಾಲನು ಕತ್ತಿ ಹಿರಿದು ಹುಂಜದ ತಲೆಯನ್ನು ಸರಸರನೆ ಕತ್ತರಿಸಿದ. ಒಂದು ಕೈಯಲ್ಲಿ ಹುಂಜದ ರುಂಡವನ್ನೂ, ಮತ್ತೊಂದು ಕೈಯಲ್ಲಿ ಮುಂಡವನ್ನೂ ಹಿಡಿದುಕೊಂಡು ಸಭೆಗೆ ತೋರಿಸುತ್ತಾ "ಹುಂಜ ಮರಣ ಹೊಂದಿತಲ್ಲವೇ?" ಎಂದು ಪ್ರಶ್ನೆ ಹಾಕಿದ. "ಹೌದು ಸತ್ತಂತೆಯೇ" ಎಂದರು ಎಲ್ಲರೂ.



ರಾಜಾಜ್ಞೆ ಪ್ರಕಾರ ಸೇವಕನು ಹುಂಜದ ರುಂಡ ಮುಂಡಗಳನ್ನು ಸಭೆಗೆದುರಾಗಿ ಆಕಡೆ ಈಕಡೆ ಇಟ್ಟ. ಸರ್ವಜ್ಞಪಾಲನು ಜೀವವಿಲ್ಲದ ಆ ಹುಂಜದ ಮುಂಡವನ್ನು ಕುರಿತು "ನೀನು ಹೋಗಿ ನಿನ್ನ ತಲೆಯನ್ನು ಮೊದಲಿನಂತೆ ತಗಲಿಸಿಕೋ" ಎಂದ.

ಏನಿದು ಆಶ್ಚರ್ಯ! ಆ ಹುಂಜದ ಮುಂಡವು ಆ ತಲೆಯಿದ್ದ ಜಾಗಕ್ಕೆ ಅಡ್ಡಡ್ಡವಾಗಿ ನಡೆಯುತ್ತಾ ಹೋಗಿ ತನ್ನ ಕತ್ತನ್ನು ಬಾಗಿಸಿತು. ಕೂಡಲೇ ರುಂಡ ಮುಂಡದೊಂದಿಗೆ ಸೇರಿತು. ಮರುನಿಮಿಷಕ್ಕೆಲ್ಲಾ ಆ ಹುಂಜ ನಿಂತು ರೆಕ್ಕೆ ಬಡಿದುಕೊಂಡು "ಕೊ ಕೊ ಕ್ಕೋ" ಎಂದು ಕೂಗುತ್ತಾ ದರ್ಬಾರಿನಿಂದ ಹೊರಗೆ ಓಡಿತು.

ಭಯಾಶ್ಚರ್ಯಗಳಿಂದ ಸಭೆಯಲ್ಲಿದ್ದ ರಾಜರು ಮತ್ತು ಪಂಡಿತರು ಬೆಕ್ಕಸಬೆರಗಾದರು. ಅವರೆಲ್ಲರೂ ವಿನಯದಿಂದ ಎದ್ದು ನಿಂತು ತಲೆತಗ್ಗಿಸಿ, ಸರ್ವಜ್ಞಪಾಲನ ಅದ್ಭುತ ಶಕ್ತಿಗೆ, ಮತ್ತು ಹಿರಿಮೆಗೆ ಜಯಕಾರಗಳನ್ನು ಮಾಡಿದರು.

"ಇಂತಹ ಅದ್ಭುತ ಶಕ್ತಿಗಳನ್ನು ಹೇಗೆ ಪಡೆದಿರಿ ಮಹಾಪ್ರಭೂ" ಎಂದು ವಿನೀತರಾಗಿ ಕೇಳಿದರು.

"ತಿಳಿದುಕೊಳ್ಳಲು ಕುತೂಹಲವಿದೆಯೇ?" ಎಂದ ಸರ್ವಜ್ಞಪಾಲ.

"ತಿಳಿದುಕೊಳ್ಳುವುದು ಮಾತ್ರವೇ ಅಲ್ಲ. ಸಾಧಿಸಬೇಕೆಂದು ನಿರ್ಧರಿಸಿರುವೆವು" ಎಂದರು ಕೆಲವರು.

"ಹಾಗಾದರೆ ಕೇಳಿ" ಎಂದು ಹೀಗೆ ಪ್ರಾರಂಭಿಸಿದ ಸರ್ವಜ್ಞಪಾಲ.

"ನನಗೆ ಚಿಕ್ಕಂದಿನಲ್ಲೇ ಅದ್ಭುತವಾದ ಕಾರ್ಯಗಳನ್ನು ಮಾಡಬೇಕೆಂದೂ, ಅಪಾರವಾದ ಶಕ್ತಿ ಹೊಂದಬೇಕೆಂದೂ ಪ್ರಬಲವಾದ ಆಕಾಂಕ್ಷೆಯಿತ್ತು. ಇದನ್ನುಗಳಿಸಲು ಸಾಹಸವು ಅಗತ್ಯವೆಂದು ಗ್ರಹಿಸಿದೆ. ಈ ಪ್ರಪಂಚದಲ್ಲಿ ಅಸಾಧ್ಯವೆಂದು ಕಾಣುವ ಪ್ರತಿಕಾರ್ಯವನ್ನೂ ಸುಸಾಧ್ಯವಾಗಿ ಮಾಡುವ ಮಾರ್ಗಗಳನ್ನು ಒಂದು ಗ್ರಂಥದಲ್ಲಿ ಬರೆದಿರುವುದೆಂದು ಒಬ್ಬ ವೃದ್ಧನು ನನ್ನೊಂದಿಗೆ ಹೇಳಿದ್ದ. ಆ ಗ್ರಂಥವು ಮಹೇಂದ್ರಜಾಲ ಪರ್ವತಗಳ ಗುಹೆಯೊಂದರಲ್ಲಿರುವುದೆಂದೂ ಸಹ ಹೇಳಿದ.



ಅನೇಕ ಕಷ್ಟನಷ್ಟಗಳಿಗೆ ಎದೆಕೊಟ್ಟು ಒಂದು ದಿನ ಆ ಗುಹೆಯನ್ನು ಸೇರಿಕೊಂಡೆ. ಗಾಳಿ ಬೆಳಕುಗಳಿಲ್ಲದ ಆ ಗುಹೆಯಲ್ಲಿ ಜೀವ ಕೈಯಲ್ಲಿ ಹಿಡಿದುಕೊಂಡು ಸ್ವಲ್ಪ ದೂರ ನಡೆಯಲು, ಹಠಾತ್ತನೆ ಭಾರಿ ಬೆಳಕೊಂದು ಕಾಣಿಸಿತು. ನನ್ನ ಶ್ರಮವು ತೀರಿತೆಂತಲೂ, ಆಶೆ ಫಲಿಸಿತೆಂತಲೂ ನನಗೆಷ್ಟೋ ಉತ್ಸಾಹವುಂಟಾಯಿತು. ತಡವರಿಸುತ್ತಾ ಆ ಬೆಳಕನ್ನು ಸಮೀಪಿಸಿದೆ.

ಆ ಬೆಳಕು ಚಚ್ಚೌಕವುಳ್ಳ ಗಾಜಿನ ಪೆಟ್ಟಿಗೆಯಿಂದ ಬರುತ್ತಿರುವಂತೆ ಮೊದಲು ನನಗೆ ತೋರಿತು. ಆದರೆ ಸೂಕ್ಷ್ಮವಾಗಿ ಪರಿಶೀಲಿಸಿ ನೋಡಲು ಅದಕ್ಕೆ ಕಾರಣ ಆ ಗಾಜಿನ ಪೆಟ್ಟಿಗೆಯ ಮಧ್ಯೆಇದ್ದ ಒಂದು ದೊಡ್ಡ ಗ್ರಂಥವೆಂದು ಗ್ರಹಿಸಿದೆ. ಆತುರದಿಂದ ಆ ಪೆಟ್ಟಿಗೆಯ ಮೇಲೆ ಕೈಹಾಕಿದೆ.

ಅದೇ ಸಮಯಕ್ಕೆ ತುಸದೂರದಲ್ಲಿ ವಿಕೃತಾಕಾರವೊಂದು ಕದಲಾಡುವುದನ್ನು ಕಂಡೆ. ಮರುಕ್ಷಣದಲ್ಲೇ ವಿಕೃತವಾದ ಧ್ವನಿ ಕೇಳಿಸಿತು. "ಏಯ್, ಯಾರು ನೀನು? ಹೊರಡು ಇಲ್ಲಿಂದ" ಎಂಬ ಭೀಕರ ಶಬ್ದ ನನ್ನನ್ನು ಸ್ತಬ್ಧನನ್ನಾಗಿ ಮಾಡಿತು. ನಾನು ಭಯವನ್ನು ನುಂಗಿಕೊಂಡು "ಈ ಗಾಜಿನ ಪೆಟ್ಟಿಗೆಯಲ್ಲಿರುವ ಆ ಗ್ರಂಥವನ್ನು ತೆಗೆದುಕೊಳ್ಳದೆ ಹೊರಗೆ ಹೋಗುವುದಿಲ್ಲ' ಎಂದೆ.

"ಹಾಗೋ, ಅಹ್ಹಾ ಹ್ಹಾ ಹ್ಹ" ಎಂಬ



ಭಯಂಕರವಾದ ಗರ್ಜನೆಯೊಂದಿಗೆ ಸಿಡಿಲು ಗುಡುಗುಗಳ ಸಮೇತವಾಗಿ ಭೋರೆಂದು ಮಳೆ ಪ್ರಾರಂಭವಾಯಿತು.

ಭಯದಿಂದ ನಾನು ನಡುಗಿಬಿಟ್ಟೆ. ದುಷ್ಟಶಕ್ತಿಗಳಿಂದ ಕಾಪಾಡಿಕೊಳ್ಳಲು ಚಿಕ್ಕಂದಿನಲ್ಲಿ ಒಬ್ಬ ಸಿದ್ಧನ ಹತ್ತಿರ ತಿಳಿದುಕೊಂಡ ಮಂತ್ರವನ್ನು ಗಟ್ಟಿಯಾಗಿ ಉಚ್ಚರಿಸಿದೆ.

ಹತ್ತು ನಿಮಿಷಗಳಲ್ಲಿ ಮಳೆ ನಿಂತುಹೋಯಿತು. ಆ ಕ್ಷಣದಲ್ಲಿ ಉಂಟಾದ ಉತ್ಸಾಹದಿಂದ ಉತ್ತೇಜಿತನಾಗಿ ಆ ಪೆಟ್ಟಿಗೆಯ ಗಾಜನ್ನು ಮುಷ್ಟಿಯಿಂದ ಗುದ್ದಿದೆ. ಅದು ಚೂರುಚೂರಾಯಿತು. ಆ ದಿವ್ಯಗ್ರಂಥವನ್ನು ಎರಡು ಕೈಗಳಿಂದ ಎತ್ತಿಕೊಂಡು ಹೃದಯಕ್ಕೆ ಅಪ್ಪಿಕೊಂಡು ಗುಹೆಯಿಂದ ಹೊರಗೆ ಬಂದೆ.

ಆ ವಿಕೃತಾಕಾರ ನನ್ನನ್ನು ಹಿಂಬಾಲಿಸುತ್ತಾ



ಪರಿಪರಿಯಾಗಿ ಶಾಪ ಕೊಡಲು ಪ್ರಾರಂಭಿಸಿತು. "ನೀನು ನನ್ನಿಂದ ತಪ್ಪಿಸಿಕೊಳ್ಳಲಾರೆ. ನಿನಗೆ ಹಗಲು ವಿಶ್ರಾಂತಿಯೂ, ರಾತ್ರಿ ನಿದ್ದೆಯೂ ಇಲ್ಲದಂತೆ ಮಾಡುವೆನು. ನೋಡಿಕೊಂಡಿರು" ಎಂದಿತು.

ಅದೇ ರೀತಿ ಆಯಿತು. ನಾಲ್ಕು ದೀರ್ಘ ವರ್ಷಗಳು ಆ ಗ್ರಂಥವನ್ನು ಪಠಿಸಿದೆ. ಎಷ್ಟೋ ಅದ್ಭುತ ಶಕ್ತಿಗಳನ್ನು ಅದರಿಂದ ಪಡೆದೆ. ಆದರೆ ನಾನು ಅದಕ್ಕಾಗಿ ತೆತ್ತ ಮೂಲ್ಯ ಅಪಾರ. ನನ್ನ ಆರೋಗ್ಯ, ಮನಶ್ಶಾಂತಿ ನಾಶವಾಯಿತು. ರಾತ್ರಿ ಹಗಲು ಸಹ ನನಗೆ ನರಕ ಸಮಾನವಾಯಿತು. ಕೊನೆಗೆ ಆ ಅದ್ಭುತ ಗ್ರಂಥವನ್ನು ಸಂಪೂರ್ಣವಾಗಿ ಓದದೆಯೇ ಆ ಗುಹೆಯಲ್ಲಿಟ್ಟು ಬರಬೇಕಾಯಿತು.

ಆದರೂ ನನಗೆ ಶಾಂತಿಯನ್ನು ಕೊಡದೆ ಆ ಭೂತಾತ್ಮವು ನನ್ನನ್ನು ಪೀಡಿಸುತ್ತಲೇ ಇತ್ತು. ಅದರಿಂದ ತಪ್ಪಿಸಿಕೊಳ್ಳಲು ನನಗೇನೂ ದಾರಿ ಕಾಣದಾಯಿತು.

ಒಂದು ದಿನ ಕೇಳಿದೆ "ನಿನ್ನ ಗ್ರಂಥ ಆ ಗುಹೆಯಲ್ಲೇ ಇಟ್ಟುಬಿಟ್ಟೆನಲ್ಲಾ. ಇನ್ನೂ ಏತಕ್ಕಾಗಿ ನನ್ನನ್ನು ಈ ರೀತಿ ತೊಂದರೆ ಪಡಿಸುವೆ?" ಎಂದು. ಅದಕ್ಕೆ ಆ ವಿಕೃತಾಕಾರ ಮತ್ತಷ್ಟು ವಿಕಾರವಾಗಿ ನಗುತ್ತಾ "ಆ ಗ್ರಂಥ ಓದಿ ನೀನು ಅನೇಕ ಅಪೂರ್ವ ಶಕ್ತಿಗಳನ್ನು ಪಡೆದಿರುವೆ, ಅದರಿಂದಾಗಿ ನಿನ್ನಿಂದ ಲೋಕಕ್ಕೆ ಕೇಡುಂಟಾಗಬಹುದು" ಎಂದಿತು.

"ಪರರ ಉಪಕಾರಕ್ಕಾಗಿ ಆ ಶಕ್ತಿಯನ್ನು ವಿನಿಯೋಗಿಸುವೆನು. ಪ್ರಮಾಣಪೂರ್ವಕವಾಗಿ ಹೇಳುತ್ತೇನೆ. ನಂಬು" ಎಂದೆ.

"ಸರಿ ಹಾಗಾದರೆ. ಆ ಮಾತಿನಂತೆ ನಡೆದುಕೊಂಡಷ್ಟು ದಿನ ನಿನ್ನ ತಂಟೆಗೆ ಬರುವುದಿಲ್ಲ" ಎಂದು ಆ ಭಯಂಕರ ಭೂತವು ನನ್ನನ್ನು ಬಿಟ್ಟು ಹೋಯಿತು. ಇದು ನನ್ನ ಕಥೆ" ಎಂದು ಮುಗಿಸಿದ.

ಗುಸಗುಸ ಮಾತುಗಳಿಂದ ದರ್ಬಾರೆಲ್ಲ ಆವರಿಸಿತು. 'ಪರರ ಸೌಖ್ಯಕ್ಕಾಗಿ ನಾವು ಕೋರಿ ಏಕೆ ಕಷ್ಟ ತಂದುಕೊಳ್ಳಬೇಕು? ನಮಗೆ ಈ ಗ್ರಂಥ ಅವಶ್ಯಕವಿಲ್ಲ' ಎಂದುಕೊಂಡರು ಪಂಡಿತರು. 'ಪರರ ರಾಜ್ಯಗಳನ್ನು ಜಯಿಸಲು, ಪ್ರಜೆಗಳನ್ನು ಹದ್ದುಬುಸ್ತಿನಲ್ಲಿಡಲು ಉಪಯೋಗವಾಗದ ಈ ಗ್ರಂಥ ನಮಗೇಕೆ' ಎಂದುಕೊಂಡರು ಅಲ್ಲಿ ನೆರೆದಿದ್ದ ರಾಜರು.



## ನಗೆಹನಿ

ಗಿರಾಕಿ—ಏನಿದಯ್ಯಾ ಬಿಸಿಬಿಸಿ ಯಾಗಿ?
ಹೋಟೆಲ್ ಮಾಣಿ—ಬಿಸಿಬಿಸಿ ಕೆಂಡ ಇದೆ.

—ಎಸ್. ಎಸ್. ಕೃಷ್ಣಮೂರ್ತಿ

* * *

ಗುರು—ಲೋ ಕಿಟ್ಟು, ನಿತ್ಯವೂ ತಪ್ಪದೆ ಪ್ರಾರ್ಥನೆ ಮಾಡುತ್ತಿರುವೆಯೋನೋ?
ಕಿಟ್ಟು—ಓ, ಮಾಡುತ್ತಿದ್ದೇನೆ ಸಾರ್,
ಗುರು—ಏನೆಂದು ಪ್ರಾರ್ಥನೆ ಮಾಡುವೆ?
ಕಿಟ್ಟು—'ಹೆಚ್ಚು ಹೆಚ್ಚಾಗಿ ತಿಂಡಿ ಕೊಡಮ್ಮಾ' ಎಂದು ಅಮ್ಮನನ್ನು ದಿನವೂ ಪ್ರಾರ್ಥಿಸುತ್ತೇನೆ.

—ಎಂ. ಆರ್. ವಿಶ್ವನಾಥರೆಡ್ಡಿ.

* * *

ಬೆಸಗೆಯವ—ಇದು ಸೀಸದ ದುಡ್ಡು ಸಾಮಿ; ನಡೆಯೋಕಿಲ್ಲಾ ಬೇರೆ ಕೊಡಿ.
ಗಿರಾಕಿ—ನಡೀದೇ ಹೋದ್ರೆ ಏನಾಯ್ತು? ಬೆಸ್ಗೆಹಾಕೋಕೆ ಉಪಯೋಗಿಸಿಕೊ.

—ಮಧ್ವೇಶರಾವ್.

* * *

ತಂದೆ—ಯಾಕೆ ಮಗೂ ಈರೀತಿ ಅಳುತ್ತೀ?
ಮಗ—ನಾನು ಅಳೋ ರೀತಿಯೇ ಇದು. ನೀನು ಬೇಕಾದರೆ ಬೇರೆ ರೀತಿ ಅಳು.

—ಎಸ್. ಆರ್. ಹಿರೇಕೆರೂರ

* * *

ರಾಯರು—ಏನಯ್ಯಾ ಶೆಟ್ಟೀ, ನೀನು ನೆನ್ನೆ ಕೊಟ್ಟ ಸಕ್ಕರೆಯಲ್ಲಿ ಬರಿಯ ಕಲ್ಲು.
ಶೆಟ್ಟಿ—ಹೌದು ರಾಯರೇ, ನೀವು ಅವತ್ತು ಕಲ್ಲು ಸಕ್ಕರೆ ಬೇಕೆಂದು ಹೇಳಿದ್ದಿರಲ್ಲ.

## ಭೂಗೋಳದ ಒಗಟುಗಳು

1. ಅರೇಬಿಯಾದಲ್ಲಿ ವಾಸ
ಆಂಗ್ಲ ರಾಜಗೆ ದಾಸ
ಹಡಗುಗಳಿಗೆ ನಿತ್ಯ
ಒದಗಿಸುತಿಹದು ಭತ್ಯ.
2. ಮಂಚೂರಿಯಾಕ್ಕೆ ನೇತಾಡು
ನೀನು ಈಗ ಸುಡುಗಾಡು.
3. ಸ್ಟಾಲಿನ್ ಸಾಯಿ ಎಂದ
ಟ್ರೂಮನ್ ಬದುಕು ಎಂದ.

ಡಿ. ಎಸ್. ರಾಜಣ್ಣ

## ಚುಟಕ

ಹೊಟ್ಟೆ ಡುಬ್ಬ
ಹಿಡಿದು ಡಬ್ಬ
ತಟ್ಟಿಕುಣಿದ—ಡಂಡವು.
ಜನರು ನೋಡಿ
ಬಂದ ರೋಡಿ
ರೊಕ್ಕ ಬಿತ್ತು—ಟಂಟಣ.

—ಕೆ. ಜಲೀಲ್ ಸಾಹೇಬ್.

ಎಳೆಯ ಹುಡುಗ ರಂಗ
ಮಾಡಿ ದುರುಳ ಸಂಘ
ತಂದುಕೊಂಡನಂದು ತನ್ನ
ಜೀವನಕ್ಕೆ ಭಂಗ.

—ಟಿ. ಸುಮಿತ್ರಾ, ಆರ್. ಪೈ.

ಒಗಟುಗಳಿಗೆ—ಉತ್ತರ :
1. ಏಡನ್, 2. ಕೊರಿಯ,
3. ಯುಗೋಸ್ಲಾವಿಯಾ.




## ಇಸ್ಪೀಟು ಎಲೆಗಳೊಂದಿಗೆ ಮತ್ತೊಂದು ಗಮ್ಮತ್ತು

ಇಸ್ಪೀಟು ಪ್ಯಾಕಿನಲ್ಲಿರುವ ಎಲೆಗಳಲ್ಲಿ ಪ್ರೇಕ್ಷಕರು ಯಾವ ಎಲೆಯನ್ನು ಆರಿಸಿಕೊಂಡರೂ ಅದನ್ನು ನೋಡದೆಯೇ ಕಲೆಸಿ, ಮತ್ತೆ ಹೊರಗೆ ತೆಗೆದು ತೋರಿಸುವ ಗಮ್ಮತ್ತು ಸಾಮಾನ್ಯವಾಗಿ ಪ್ರತಿಯೊಬ್ಬ ಇಂದ್ರಜಾಲಕನೂ ಮಾಡುವನು. ಆದರೆ ಈಗ ಹೇಳುವ ಮೋಡಿಗೆ ಮಾಮೂಲು ಡಿಸೈನುಗಳಲ್ಲದೆ ಹಿಂದುಗಡೆ ಯಾವುದಾದರೊಂದು ಚಿತ್ರಗಳಿರುವ ಇಸ್ಪೀಟು ಎಲೆಗಳು ಬೇಕಾಗುತ್ತದೆ. ಉದಾಹರಣೆಗಾಗಿ ಗುಲಾಬಿ ಹೂ ಚಿತ್ರ ಇರುವ ಇಸ್ಪೀಟು ಪ್ಯಾಕು ಇರುವುದೆಂದು ಭಾವಿಸುವ. ಹೂವಿನ ಕಾಂಡ ಕೆಳಗಡೆ ಬರುವಂತೆ ಆ ಪ್ಯಾಕಿನಲ್ಲಿ ಎಲೆಗಳನ್ನೆಲ್ಲಾ ಜೋಡಿಸಿಟ್ಟುಕೊಳ್ಳಬೇಕು. ಆ ಪ್ಯಾಕಿನ ಎಲೆಗಳ ಮುಂಭಾಗ ಪ್ರೇಕ್ಷಕರಿಗೆ ಕಾಣಿಸುವಂತೆ ಬಿಡಿಸಿಟ್ಟುಕೊಂಡು 'ನಿಮಗೆಬೇಕಾದ ಎಲೆಯನ್ನು ಆರಿಸಿಕೊಳ್ಳಿ' ಎಂದು ಹೇಳಬೇಕು. ಪ್ರೇಕ್ಷಕರಲ್ಲೊಬ್ಬನು ತಾನು ಆರಿಸಿಕೊಂಡ ಎಲೆಯನ್ನು ಹೊರಗೆ ಎಳೆಯುವನು. ಇಂದ್ರಜಾಲಕನಿಗೆ ಅದು ಯಾವ ಎಲೆಯೋ ಈಗ ಗೊತ್ತಿಲ್ಲ. ಪ್ರೇಕ್ಷಕನು ಮತ್ತೆ ಆ ಎಲೆಯನ್ನು ಇಂದ್ರಜಾಲಕನ ಕೈಯಲ್ಲಿರುವ ಪ್ಯಾಕಿನಲ್ಲಿಸೇರಿಸುವಷ್ಟರಲ್ಲಿ, ಈತನು ತನ್ನ ಕೈಯಲ್ಲಿರುವ ಎಲೆ



ಗಳನ್ನು ಪ್ರೇಕ್ಷಕರಿಗೆ ತಿಳಿಯದಂತೆ ತಲೆಕೆಳಗೆ ಮಾಡಿಟ್ಟುಕೊಂಡಿರಬೇಕು. ಈಗ ಆ ಪ್ರೇಕ್ಷಕನು ತಾನು ಆರಿಸಿದ ಎಲೆಯನ್ನು ಪ್ಯಾಕಿನಲ್ಲಿ ಸೇರಿಸುವಾಗ ಆ ಎಲೆಯ ಹಿಂದಿನಭಾಗ

ಮಾತ್ರ ಮೊದಲಿನಂತೆಯೇ ನೇರವಾಗಿ ಇರುತ್ತದೆ. ಪ್ಯಾಕಿನಲ್ಲಿರುವ ಇತರ ಎಲೆಗಳೆಲ್ಲಾ ತಲೆಕೆಳಗಾಗಿರುತ್ತೆ. ಮೊದಲಿನ ಚಿತ್ರ ನೋಡಿ. ಗುಲಾಬಿ ಹೂವಿನ ದಂಟು ಎಲ್ಲ ಎಲೆಗಳಲ್ಲಿ ಕೆಳಗಡೆ ಇದೆ. ಪ್ರೇಕ್ಷಕನು ಅದರಲ್ಲೊಂದು ಎಲೆ ತೆಗೆದಿದ್ದಾನೆ.

ಈ ಕೆಳಗೆ ಚಿತ್ರ ನೋಡಿ. ಇಂದ್ರಜಾಲಕನು ತನ್ನ ಕೈಯಲ್ಲಿದ್ದ ಎಲೆಗಳನ್ನು ತಲೆ ಕೆಳಗಾಗಿಮಾಡಿಬಿಟ್ಟಿದ್ದಾನೆಂದಾಯಿತು. ಗುಲಾಬಿಯ ದಂಟು ಮೇಲೆ ಕಾಣಿಸುತ್ತಿದೆ. ಪ್ರೇಕ್ಷಕನು ತಾನು ಆರಿಸಿದ್ದ ಎಲೆಯನ್ನು ಮತ್ತೆ



ಪ್ಯಾಕಿನಲ್ಲಿ ಸೇರಿಸುವಾಗ ದಂಟು ಕೆಳಗೆ, ಹೂ ಮೇಲೆ ಇರುವುದು ಕಾಣಿಸುತ್ತದೆಯಷ್ಟೆ. ಪ್ಯಾಕನ್ನು ಎಷ್ಟುಸಾರಿ ಕಲೆಸಿದರೂ ಆ ಎಲೆ ಹೊರತು ಬೇರೆಲ್ಲವೂ ಒಂದುರೀತಿಯಾಗಿ ಬದಲಾಯಿಸಿರುತ್ತದೆ. ಆದ್ದರಿಂದ ಹಿಂದುಗಡೆ ಮಾತ್ರ ನೋಡಿ, ಇಂದ್ರಜಾಲಕ ಆ ಎಲೆಯನ್ನು ತೆಗೆದು ತೋರಿಸಬಲ್ಲ. 'ಸಾಮಾನ್ಯವಾಗಿ ಸಿಗುವ ಗ್ರೇಟ್ ಮೊಗಲ್, ಕಾರವಾನ್ ಮುಂತಾದ ಪ್ಯಾಕುಗಳಿಂದ ಈ ಯುಕ್ತಿ ಮಾಡುವುದು ಹೇಗೆ' ಎಂದು ಕೇಳಬಹುದು. ಅದೇನು ಕಷ್ಟವಿಲ್ಲ. ಪ್ಯಾಕನ್ನು ತಂದ ಕೂಡಲೇ ಆ ಡಿಸೈನ್ ಕೆಳಗೆ ಇರುವ ಮಾರ್ಜಿನ್‌ನಲ್ಲಿ ಎಲ್ಲ ಎಲೆಗಳಿಗೂ ಮಸಿಯಿಂದ ಒಂದೇರೀತಿ ಗುರುತು ಮಾಡಿಟ್ಟುಕೊಳ್ಳಿ. ಹಾಗೆ ಮಾಡಿಟ್ಟುಕೊಂಡರೆ ಪ್ರೇಕ್ಷಕನು ಎಲೆಯೊಂದನ್ನು ಆರಿಸಿಕೊಂಡಾಗ ನೀವು ಚಾಕಚಕ್ಯತೆಯಿಂದ ಪ್ಯಾಕನ್ನು ತಲೆ ಕೆಳಗೆ ಮಾಡಿದರೆ ಈಗ ನೀವು ಮಾಡಿರುವ ಗುರುತುಗಳೆಲ್ಲಾ ಒಂದು ಕಡೆಯೂ, ಪ್ರೇಕ್ಷಕನು ಪ್ಯಾಕಿನೊಳಗೆ ಮತ್ತೆ ಸೇರಿಸಿದ ಎಲೆಯ ಗುರುತು ಮತ್ತೊಂದು ಕಡೆಯೂ ಇರುತ್ತದೆ. ಆ ಗುರುತಿನಿಂದ ಸುಲಭವಾಗಿ ಪ್ರೇಕ್ಷಕನು ಆರಿಸಿಕೊಂಡಿದ್ದ ಎಲೆಯನ್ನು ತೆಗೆದು ಕೊಡಬಹುದು.

---

**ಪಾಠಕರು ಈ ಗಾರುಡಿಯನ್ನು ಕುರಿತು ಇನ್ನೂ ವಿವರಗಳನ್ನು ತಿಳಿದುಕೊಳ್ಳಬೇಕೆಂದರೆ, ಅವರು 'ಚಂದಮಾಮದ' ಹೆಸರು ಸೂಚಿಸಿ, ಪ್ರೊಫೆಸರ್ ಸರ್ಕಾರ್‌ರವರಿಗೆ ನೇರವಾಗಿ ಬರೆಯಬಹುದು. ಪತ್ರ ಇಂಗ್ಲೀಷಿನಲ್ಲಿರಬೇಕು. ಅವರ ಪತ್ತೆ:**

**ಪ್ರೊಫೆಸರ್ ಪಿ. ಸಿ. ಸರ್ಕಾರ್, ಮೆಜಿಷಿಯನ್**
**12/3/A, ಜಮೀರ್ ಲೇನ್, ಬಾಲಿಗಂಜ್**
**ಕಲಕತ್ತಾ-19**

# ಸತ್ಯಾಗ್ರಹ

ಶ್ರೀ ಕಲಾಕುಮಾರ



ಒಂದು ನೂರ ಹದಿನಾಲ್ಕು ವರ್ಷಗಳ ಹಿಂದೆ ಇಂಗ್ಲೆಂಡು ದೇಶದಲ್ಲಿ ನಡೆದ ಕಥೆ ಇದು. ಆ ದೇಶದ ಒಂದು ಹಳ್ಳಿಯಲ್ಲಿ ಒಬ್ಬ ಪಾದ್ರಿ ಇದ್ದನು. ಅವನಿಗೆ ಮೂವರು ಹೆಣ್ಣುಮಕ್ಕಳು. ಮೊದಲನೆಯವಳ ಹೆಸರು ಚಾರ್ಲೊಟ, ಎರಡನೆಯವಳು ಎಮಿಲಿ, ಮೂರನೆಯವಳು ಅನ್ನಾ.

ತಾಬಿ ಎಂಬವಳು ಇವರ ಮನೆಗೆಲಸದವಳು ಮನೆ ಕೆಲಸವೆಲ್ಲಾ ಮುಗಿದಾಗ ಅಥವ ಮಧ್ಯೆ ಬಿಡುವು ದೊರೆತಾಗ ತಾಬಿಯು ಈ ಮೂರು ಹುಡುಗಿಯರಿಗೂ ಕಥೆ ಕಟ್ಟಿ ಹೇಳುತ್ತಾಳೆ—ಕವನಗಳನ್ನು ಹಾಡಿ ನಲಿಸುತ್ತಾಳೆ—ಹತ್ತಿರದ ತೋಟಗಳಿಗೆ ಕರೆದೊಯ್ದು ಕಣ್ಣು ಮುಚ್ಚಾಲೆಯಾಡಿಸುತ್ತಾಳೆ. ಹೀಗೆ ದಿನವೂ ಈ ಹುಡುಗಿಯರನ್ನು ಆಡಿಸಿ ಅವರ ಎಳೆತನದ ಆನಂದದಲ್ಲಿ ತಾನೂ ಭಾಗಿಯಾಗಿ, ಅವರ ಆನಂದವನ್ನೂ ಹೆಚ್ಚಿಸುತ್ತಿದ್ದಳು. ತಾಬಿ ಎಂದರೆ ಹುಡುಗಿಯರಿಗೆ ಅಗಲಲಾರದಂತಹ ಪ್ರೇಮ; ಅವಳು ಅವರ ಪಂಚಪ್ರಾಣ! ತಾಬಿಯು ಹೇಳಿದ ಕಥೆಗಳು, ಹಾಡಿದ ಗೀತಗಳು, ಆಡಿದ ಸವಿಮಾತುಗಳು ಈ ಹುಡುಗಿಯರ ಮನಸ್ಸಿನಲ್ಲಿ ತೆರೆತೆರೆಯಾಗಿ ಅಲೆದು ಅವರೂ ಸಹ ಕಥೆ ಹೇಳುವ ಕಲೆಯಲ್ಲಿ ಬಲ್ಲಿದರಾಗುವಂತೆ ಮಾಡುತ್ತಿದ್ದವು.

ಕಾಲ ಕಳೆಯುತ್ತ ಬಂದಿತು. ತಾಬಿಯು ಮುದುಕಿಯಾಗುತ್ತಾ ಬಂದಳು. ಅವಳ ಕೈಕಾಲುಗಳಲ್ಲಿ ಶಕ್ತಿ ಕುಂದುತ್ತಾ ಬಂದಿತು. ಕೆಲಸ ಮಾಡಲು ಅವಳಿಗೆ ಕೂಡದಾಯಿತು. ದುರದೃಷ್ಟವೊ ಎಂಬಂತೆ ಒಂದು ದಿನ ಅವಳು ಮೆಟ್ಟಿಲಿಂದ ಬಿದ್ದು ಕಾಲು ಮುರಿದುಕೊಂಡಳು. ಪಾಪ ಹುಡುಗಿಯರಿಗೆ ತುಂಬಾ ಬೇಸರವಾಯಿತು. ಮನೆಯ ಹಿರಿಯರೆಲ್ಲಾ ಸೇರಿ ಯೋಚಿಸಿ ತಾಬಿಯನ್ನು ಅವಳ ಊರಿಗೆ ಕಳಿಸುವುದೆಂತ ನಿಶ್ಚಯಿಸಿದರು. ಹುಡುಗಿಯರ ತಂದೆ, ಪಾದ್ರಿ ಧನಿಕನಲ್ಲದುದರಿಂದ ಕೆಲಸ ಮಾಡಲಾರದ ತಾಬಿಯನ್ನು ಸಾಕಲಾರೆನೆಂದುಕೊಂಡನು. ಅವಳು ಈ ಸಂಸಾರಕ್ಕೆ ಭಾರವೇ ಸರಿ ಎಂದು ಮಾತನಾಡಿಕೊಂಡರು.

ಹುಡುಗಿಯರು ಸಂಜೆ ಶಾಲೆಯನು ಮುಗಿಸಿಕೊಂಡು ಮನೆಗೆ ಬಂದರು. ಮನೆಯಲ್ಲೇನೋ ಗುಸುಗುಸು ಮಾತು ನಡೆದಿದೆ. ತಾಬಿಯು ಮಾತನಾಡದೆ ಮಲಗುವ ಮನೆಯಲ್ಲಿ ಮಲಗಿದ್ದಾಳೆ. ಹುಡುಗಿಯರ ಹತ್ತಿರವೂ ಅವಳ ಮಾತಿಲ್ಲ. ಈ ಹಿಂದೆ ಎಂದೂ ಇಂಥ ನಡತೆ ಅವಳಲ್ಲಿ ಕಂಡು ಬಂದಿರಲಿಲ್ಲ.

ಕೊನೆಗೆ ಪಾದ್ರಿಯ ಪತ್ನಿ ಹೇಳಿದಳು ಹುಡುಗಿಯರಿಗೆ ನಡೆದ ವಿಚಾರವನ್ನು. ತಾಬಿಯನ್ನು ಮನೆ ಬಿಟ್ಟೋಡಿಸಬೇಕೆಂಬ ವಿಚಾರವನ್ನು ಕೇಳಿದೊಡನೆ, ಹುಡುಗಿಯರ ಕಣ್ಣುಗಳು ಕೆಂಡವನ್ನು ಸೂಸಿದುವು. ತುಟಿಗಳು ತಿರಸ್ಕಾರವನ್ನು ಸೂಚಿಸಿತು. ಮುಖ ಮುದುರುತ್ತಾ ಅವರು ತಾಯ ಎದುರಿಂದ ಹೊರಟು ಹೋದರು. ಮೂವರ ಹೃದಯದಲ್ಲೂ ತಳಮಳ, ಮನಸ್ಸಿನಲ್ಲಿ ಒಂದೇ ಯೋಚನೆ. ಮಾತಿನಲ್ಲೂ ಮನಸ್ಸಿನಲ್ಲೂ ಅವರು ಒಂದೇ ನಿಶ್ಚಯಕ್ಕೆ ಬಂದರು. ತಾವು ಚಿಕ್ಕವರಾಗಿದ್ದಾಗ ತಾಬಿಯು ತಮ್ಮನ್ನು ಆದರದಿಂದ ಪಾಲಿಸಿ ಪೋಷಿಸಿದಳು. ಈಗ ಅವಳನ್ನು, ಅದೂ ಅವಳು ಕೇವಲ ಅಶಕ್ತಳಾಗಿರುವಾಗ ಮನೆಯಿಂದ ಬಿಡಿಸಿ ಕಳಿಸುವುದೆ? ಛೆ ಛೆ! ಎಂದಿಗೂ ಕೂಡದು. ಈಗ ಅವಳನ್ನು ಪಾಲಿಸಿ ಪೋಷಿಸುವುದು ತಮ್ಮ ಸರದಿ. ಈ ನಿರ್ಧಾರಕ್ಕೆ ಬಂದರು. ಚಾರ್ಲೊಟೆ, ಎಮಿಲಿ, ಮತ್ತು ಅನ್ನಾ.

ರಾತ್ರಿ ಊಟದ ಸಮಯ ಬಂದಿತು. ಊಟಕ್ಕೆ ಎಲ್ಲರೂ ಕುಳಿತರು. ಹುಡುಗಿಯರೂ ಬಂದು ಕುಳಿತರು. ಆದರೆ ಊಟವನ್ನು ಕೈಯಿಂದ ಮುಟ್ಟಲೂ ಇಲ್ಲ. ತಾಬಿಯನ್ನು ಸಾಯುವವರೆಗೂ ತಮ್ಮ ಮನೆಯಲ್ಲೇ ಇಟ್ಟುಕೊಂಡು ಪೋಷಿಸಬೇಕೆಂಬ ತಮ್ಮ ಆಸೆಯನ್ನು ತಂದೆ ತಾಯಿಗಳಿಗೆ ಸೂಚಿಸಿದರು. ರಾತ್ರಿ ಊಟಮಾಡದೆ ಸತ್ಯಾಗ್ರಹವನ್ನು ಹೂಡಿದರು! ಮಾರನೆಯ ದಿನ ಬೆಳಗ್ಗೆಯೂ ಅವರು ಆಹಾರವನ್ನು ಮುಟ್ಟಲಿಲ್ಲ. ಮಧ್ಯಾಹ್ನದ ಹೊತ್ತಿಗೆ ಅವರ ಕಳೆಗುಂದಿದ ಮುಖಗಳನ್ನು ನೋಡಿ ತಾಯಿ ತಂದೆಗಳ ಕರುಳು ಮರುಗಿತು; ಮನಸ್ಸು ಕರಗಿತು; ನಿರ್ಧಾರ ಚಲಿಸಿತು! ತಮ್ಮ ಮಕ್ಕಳ ದೊಡ್ಡ ಮನಸ್ಸನ್ನು ಕಂಡು ಆನಂದದಿಂದ ಆ ತಾಯಿ ತಂದೆಗಳ ಹೃದಯ ಉಬ್ಬಿತು. ಮಕ್ಕಳನ್ನು ಕರೆದು ಹೇಳಿದರು ಅವರ ಇಷ್ಟ ಕೈಗೂಡಿತೆಂದು!! ಅಂದು ಮಧ್ಯಾಹ್ನ ತಾಬಿಯನ್ನು ಮಧ್ಯೆ ಕುಳ್ಳಿರಿಸಿಕೊಂಡು ಊಟ ಮಾಡಿದರು ಹುಡುಗಿಯರು. ಅವರ ಸತ್ಯಾಗ್ರಹದ ಫಲ ಸಿದ್ಧಿಸಿತು.

ಮುಂದೆ ಈ ಮೂರು ಜನ ಹುಡುಗಿಯರೂ ಮಹಾಪ್ರಸಿದ್ಧರಾದ ಬರಹಗಾರರಾರು. ಅವರ ಈ ಸತ್ಯಾಗ್ರಹ ಸಿದ್ಧಿಸಿದ ಹತ್ತು ಹನ್ನೆರಡು ವರ್ಷಗಳ ಅನಂತರ ಚಾರ್ಲೊಟ್ ಬ್ರಾಂಟಳು "ಜೇನ್ ಐರ್" ಎಂಬ ಕಾದಂಬರಿಯನ್ನೂ, ಎಮಿಲಿ ಬ್ರಾಂಟಳು "ವುದರಿಂಗ್ ಹೈಟ್ಸ್" ಎಂಬ ಮಹಾಕಾದಂಬರಿಯನ್ನೂ, ಅನ್ನಾಳು "ಆಗ್ನೇಸ್ ಗ್ರೇ" ಎಂಬ ಕಾದಂಬರಿಯನ್ನೂ ಬರೆದರು. ಇಂಗ್ಲೀಷು ಸಾಹಿತ್ಯದಲ್ಲಿ ಪ್ರಪಂಚದಲ್ಲೆಲ್ಲಾ ಈ ಕಾದಂಬರಿಗಳು ತುಂಬಾ ಜನ ಪ್ರಿಯವಾಗಿವೆ. ಇಂದೂ ಸಹ ಸಾವಿರಾರು ಜನರು ಕುತೂಹಲ ಆದರದಿಂದ ಈ ಪುಸ್ತಕಗಳನ್ನು ಓದುತ್ತಿದ್ದಾರೆ.

## ಬಣ್ಣದ ಚಿತ್ರ ಕಥೆ—ಚಿತ್ರ - 3

ದಿನಗಳೂ, ತಿಂಗಳುಗಳೂ, ಉರುಳಿಹೋದುವು; ಆದರೆ ಆ ಕೊಡೆಮಾತ್ರ ಕೊಂಡು ಕೊಳ್ಳುವವರಿಲ್ಲದೆ ಹಾಗೇ ಉಳಿದುಹೋಯಿತು. ಚಾಂಗ್‌ನ ತಾಯಿಗೆ ಕಸಿವಿಸಿಯಾಯಿತು. 'ಏನಾದರಾಗಲಿ, ಈಸಲ ಎಷ್ಟಕ್ಕಾದರೂ ಅದನ್ನು ಮಾರಿಯೇ ಬಿಡುವೆನು' ಎಂದು ನಿಶ್ಚಯಿಸಿಕೊಂಡಳು. ಹಾಗೆ ಅಂದುಕೊಂಡಳಾದರೂ ಕಡೆಗೆ ಅವಳು ಊಹಿಸಿದುದಕ್ಕಿಂತ ಹೆಚ್ಚು ಬೆಲೆಯೇ ಅದಕ್ಕೆ ಬಂದಿತು. ಏಕೆಂದರೆ ಆ ಮಾರುದಿನವೇ ಒಬ್ಬ ಧನಿಕನು ತನ್ನ ಮಗಳೊಂದಿಗೆ ಆ ಅಂಗಡಿಗೆ ಬಂದನು. ಆ ಕುಮಾರಿಯು ಆ ಅಪೂರ್ವ ಹಿಡಿಯುಳ್ಳ ಕೊಡೆ ಕಂಡಕೂಡಲೇ ಅದು ತನಗೆ ಬೇಕೆಂದು ತಂದೆಯನ್ನು ಕೇಳಿಕೊಂಡಳು. ತನ್ನ ಏಕೈಕ ಪುತ್ರಿಯು ಕೋರಿದುದನ್ನು ಆ ತಂದೆ ಎಂದೂ ಇಲ್ಲವೆನ್ನುತ್ತಿರಲಿಲ್ಲ. ಆದುದರಿಂದ ಚಾಂಗನ ತಾಯಿಯು ಕೇಳಿದಷ್ಟು—ಒಂದು ನೂರುನಾಣ್ಯ—ಕೊಟ್ಟು ಆ ಕೊಡೆಯನ್ನುಕೊಂಡು ತನ್ನ ಪ್ರಿಯಗುವರಿ ಶಾನ್‌ಮಿಂಗ್ ಕೈಗಿತ್ತನು.

ಶಾನ್‌ಮಿಂಗ್ ಯಾವಾಗ ಎಲ್ಲಿಗೆಹೋದರೂ ಆ ಕೊಡೆಯನ್ನು ಬಿಟ್ಟಿರುತ್ತಿರಲಿಲ್ಲ. ಆಕೆಗೆ ಯುಕ್ತವಯಸ್ಸು ಬಂದಿತು. ಇತರ ವಿಷಯಗಳಂತೆ ಆಕೆಯ ವಿವಾಹ ವಿಷಯದಲ್ಲೂಕೂಡಾ ತಂದೆಯು ಶಾನ್‌ಮಿಂಗಿಗೆ ಪೂರ್ಣಸ್ವಾತಂತ್ರ್ಯ ಕೊಟ್ಟನು. ತನಗಿಷ್ಟ ಬಂದ ಯುವಕನನ್ನು ವಿವಾಹವಾಗಲು ಅನುಮತಿ ಕೊಟ್ಟನು.

ಸ್ವಲ್ಪಕಾಲವಾದ ಮೇಲೆ ಶಾನ್‌ಮಿಂಗ್ ಮನೆಗೆ ಆಕೆಯ ತಂದೆಯ ಸ್ನೇಹಿತನೊಬ್ಬನು ತನ್ನ ಮಗನೊಂದಿಗೆ ಬಂದನು. ಆ ಸುಂದರ ಯುವಕನನ್ನು ನೋಡಿದ ಕೂಡಲೇ ಶಾನ್ ಮಿಂಗ್ ಆತನೇ ತನ್ನ ಪತಿಯೆಂದು ನಿಶ್ಚಯಿಸಿಕೊಂಡಳು. ಆದಿನ ಸಾಯಂಕಾಲ ಶಾನ್ ಮಿಂಗ್ ಆ ಯುವಕನೊಡನೆ ತಮ್ಮ ಉದ್ಯಾನವನದಲ್ಲಿ ವಿಹರಿಸಲು ಹೋದಳು. ಆಗ ತನ್ನ ನಿಶ್ಚಯವನ್ನು ಆ ಯುವಕನಿಗೆ ಹೇಳಬೇಕೆಂದಿರುವಷ್ಟರಲ್ಲಿ ತನ್ನ ಕೈಯ್ಯಲಿದ್ದ ಕೊಡೆಯನ್ನು ಯಾರೋ ಹಿಡಿದೆಳೆದಂತಾಯಿತು.

ಶಾನ್‌ಮಿಂಗಿಗೆ ಆಶ್ಚರ್ಯವಾಯಿತು. ಸುತ್ತಲೂ ಪರೀಕ್ಷಿಸಿ ನೋಡಿದಳು. ಆ ಯುವಕನ ಹೊರತು ಮತ್ತಾರೂ ಇಲ್ಲ. ಬರಿಯ ಭ್ರಮೆಯೆಂದುಕೊಂಡು ಮತ್ತೆ ಹೇಳಲು ಮಾತೆತ್ತಿದಾಗ ಪುನಃ ಅದೇ ವಿಧವಾಗಿ ಕೊಡೆಯನ್ನು ಯಾರೋ ಜಗ್ಗಿಸಿ ಎಳೆದಂತಾಯಿತು. ಶಾನ್‌ಮಿಂಗ್ ಇದರಲ್ಲೇನೋ ಮಾಯವಿದೆಯೆಂದುಕೊಂಡು ಪುನಃ ಮಾತನಾಡಲು ಪ್ರಯತ್ನಿಸದೆ ಹೇಗೋ ಕೊಂಚಕಾಲ ಹಾಗೇ ಕಳೆದು ಬಿಟ್ಟು ನಂತರ ಮನೆ ಸೇರಿಕೊಂಡಳು.

# ಒಂದೇ ಗೆರೆಯ ಚಿತ್ರ




ಕೆ. ಆರ್ಮುಗಂ - ಸಿಲೋನ್

